# ವೀರಶೈವಾಗಮ

# ಪ್ರಯೋಗರತ್ನಮ್

ಆಸ್ಥಾನ ವಿದ್ವಾನ್
ಎಂ. ಜಿ. ನಂಜುಂಡಾರಾಧ್ಯ
ಪ್ರಾಧ್ಯಾಪಕ: ಶಕ್ತಿವಿಶಿಷ್ಟಾದ್ವೈತ ವೇದಾಂತ
ಶ್ರೀಮನ್ಮಹಾರಾಜ ಸಂಸ್ಕೃತ ಕಾಲೇಜು, ಮೈಸೂರು



ಪ್ರಬೋಧ ಪುಸ್ತಕಮಾಲೆ
ಬಸವೇಶ್ವರ ರಸ್ತೆ : : ಮೈಸೂರು-೪

ಪ್ರಥಮ ಮುದ್ರಣ ೧೯೬೮





ಸಾಮಾನ್ಯ ಪ್ರತಿ ಹತ್ತು ರೂಪಾಯಿಗಳು
ಕ್ಯಾಲಿಕೊ ಪ್ರತಿ ಹದಿನೈದು ರೂಪಾಯಿಗಳು

ಮುದ್ರಕರು
ಪ್ರಬೋಧ ಮುದ್ರಣ ಮತ್ತು ಪ್ರಕಟನಾಲಯ
ಬಸವೇಶ್ವರ ರಸ್ತೆ : : ಮೈಸೂರು-೪

# ಮುನ್ನುಡಿ

ಆಗಮಗಳು ಸಮಸ್ತರಿಗೂ ಪರಮೋಪಕಾರಕವಾಗಿವೆ ಎಂಬುದನ್ನು 'ಸರ್ವೇಷಾಂ ಪ್ರಾಣಿನಾಂ ಮುಕ್ತ್ಯೈ ತೇಭ್ಯೋ ನಾನ್ಯಾನಿ ಭೂತಲೇ', ಎಂದೂ 'ಸರ್ವೇಷಾಮಪಿ ಲೋಕಾನಾಂ ಅವಶ್ಯಂ ಮುಕ್ತಿಕಾರಣಮ್' ಎಂದೂ ನಮ್ಮ ಹಿರಿಯರು ತಿಳಿಸಿದ್ದಾರೆ. ಅಪೌರುಷೇಯವೆಂದು ನಾವು ಮಾನ್ಯಮಾಡುವ ಶ್ರುತಿಗಳೂ ಸಹ ಭಗವಂತನ ರೂಪವತ್ತ್ವವನ್ನೂ ಭಗವ ದರ್ಚನೆಯನ್ನೂ 'ಹಿರಣ್ಯರೂಪಃ ಸ ಹಿರಣ್ಯಸಂದೃಕ್' ಎಂದೂ, 'ಸಹಸ್ರಂ ಸಾಕಮರ್ಚತ' ಎಂದೂ ಉಪದೇಶಿಸುತ್ತಿವೆ. ವೇದಗಳಂತೆಯೇ ಆಗಮಗಳೂ ಪರಮ ಪ್ರಾಚೀನವಾದವು ; ಹಿಂದೂಧರ್ಮಕ್ಕೆ ಆಧಾರಗಳಾಗಿರುವವು. ಇವೆ ರಡಕ್ಕೂ ಸಮವಾದ ಪ್ರಾಧಾನ್ಯವನ್ನು ನಮ್ಮ ಹಿರಿಯರು ಹೇಳಿದ್ದಾರೆ.

'ನಿಃಶ್ವಸಿತಮಸ್ಯವೇದಾಃ ವಾಗ್ರೂಪಾಶ್ಚಾಗಮಾ ಯಸ್ಯ ।'
'ವೇದಃ ಪ್ರಧಾನಂ ಸರ್ವೇಷಾಂ ಸಾಂಖ್ಯಾದೀನಾಂ ಮಹಾಮುನೇ ।
ವೇದಾನುಸರಣಾದೇಷಾಂ ಪ್ರಾಮಾಣ್ಯಮಿತಿ ನಿಶ್ಚಿತಮ್ ॥'
ವೈದಿಕೀ ತಾಂತ್ರಿಕೀ ಚೈವ ದ್ವಿವಿಧಾ ಶ್ರುತಿ ಕೀರ್ತಿತಾ ।'

ಮುಂತಾದ ಉಕ್ತಿಗಳು ಈ ಅಂಶವನ್ನು ಸಮರ್ಥಿಸುತ್ತವೆ.

ನಮ್ಮ ದೇಶದಲ್ಲಿ ವಿಧವಿಧವಾಗಿ ಬೆಳೆದ ದರ್ಶನ ಪದ್ಧತಿಗಳೆಲ್ಲಾ ಆಗಮ ಗಳಿಂದ ಪ್ರಭಾವಿತವಾಗಿವೆ ಹಾಗೂ ಇವುಗಳ ಆವಶ್ಯಕತೆಯನ್ನು ಮನಗಂಡಿವೆ. ದ್ವೈತಾದ್ವೈತಾದಿ ಸಿದ್ಧಾಂತಗಳನ್ನು ಉಪದೇಶಿಸುವ ದರ್ಶನಗಳೂ ಸಹ ಅರ್ಚನಾ ವಿಧಾನವನ್ನೂ, ಮೂರ್ತಿಪೂಜೆಯನ್ನೂ, ಆಗಮಗಳ ಪ್ರಾಮಾಣ್ಯ ವನ್ನೂ ಒಂದಲ್ಲ ಒಂದು ಹಂತದಲ್ಲಿ ಅಂಗೀಕರಿಸಿವೆ ಮತ್ತು ಅನುಸರಿಸುತ್ತಿವೆ. ಪರತತ್ತ್ವವು ನಿಷ್ಕಲ, ನಿರಂಜನ, ನಿರಾಕಾರ ಎಂದು ಸಾರುವವರೂ ಸಹ ಆ ನಿರಾಕಾರ ಸ್ವರೂಪಿಯನ್ನು ಸಾಕ್ಷಾತ್ಕರಿಸಲು ಮೊದಲ ಹೆಜ್ಜೆಯಾಗಿ ಸಾಕಾರೋಪಾಸನೆಯನ್ನೇ ವಿಧಿಸಿದ್ದಾರೆ. ಇದರಿಂದ ಪುಷ್ಟಿಗೊಂಡ ಸಾಧಕ ನಿರಾಕಾರೋಪಾಸನೆಯಲ್ಲಿ ತೊಡಗಬೇಕು. ಭಗವಂತನು ಸಾಕಾರನೆಂಬುವವರಿ ಗಂತೂ ಈ ಮಾರ್ಗ ಸರ್ವಾವಸ್ಥೆಗಳಲ್ಲಿಯೂ ಮಾನ್ಯವೇ ಆದುದು. ವೇದ ಪ್ರಾಮಾಣ್ಯವನ್ನು ಒಪ್ಪದ ಜೈನ ಬೌದ್ಧ ಪಂಥಗಳವರೂ ಕೂಡ ತಮ್ಮದೇ

ಆದ ಜೈನಾಗಮ ಮತ್ತು ಬೌದ್ಧಾಗಮಗಳನ್ನು ಹೊಂದಿರುವುದನ್ನು ನಾವು ಗಮನಿಸಿದಾಗ ಆಗಮಗಳ ಮಹತ್ವ ಗೊತ್ತಾಗುತ್ತದೆ. ಆದುದರಿಂದಲೇ ನಮ್ಮ ನಾಡಿನ ತತ್ವಜ್ಞಾನಿಗಳೆಲ್ಲರೂ ಆಗಮಗಳಿಗೆ ಪ್ರಾಧಾನ್ಯ ನೀಡಿದ್ದಾರೆ. ಧಾರ್ಮಿಕ ಜೀವನವನ್ನು ರೂಪುಗೊಳಿಸುವುದರಲ್ಲಿಯೂ ಚಿತ್ತೈಕಾಗ್ರತೆಯನ್ನು ಸಾಧಿಸುವುದರಲ್ಲಿಯೂ ಆಗಮಗಳು ಪ್ರಭಾವ ಬೀರುವವೆಂದು ಎಲ್ಲರೂ ಒಪ್ಪಿದ್ದಾರೆ. ಆಚಾರಾಂಗ, ಧರ್ಮಶಾಸ್ತ್ರ ಮತ್ತು ದರ್ಶನಗಳಂತೆ ಪೂಜಾ ಪ್ರಕ್ರಿಯೆಗಳೂ ಧರ್ಮದ ಮುಖ್ಯ ಅಂಗಗಳಾಗಿವೆ.

ಆಗಮಗಳು ಅನೇಕ ಪ್ರಕಾರಗಳಲ್ಲಿವೆ. ನಮ್ಮ ದೇಶದಲ್ಲಿ ಹೇಗೆ ದರ್ಶನ ಸಂಪ್ರದಾಯಗಳು ವಿವಿಧ ಪ್ರಕಾರಗಳಲ್ಲಿ ಬೆಳೆದವೋ ಹಾಗೆಯೇ ಆಗಮಗಳೂ ಅನೇಕ ಪ್ರಕಾರಗಳಲ್ಲಿ ಬೆಳೆದಿವೆ. ಶೈವ, ವೈಷ್ಣವ, ಸೌರ, ಶಾಕ್ತ, ಗಾಣಾಪತ ಮೊದಲಾದ ವಿವಿಧ ಪ್ರಕಾರಗಳು ಪ್ರಸಿದ್ಧವಾಗಿವೆ. ಆಗಮಶಾಸ್ತ್ರ ಅಪಾರವಾದ ಜ್ಞಾನಭಂಡಾರವಾಗಿದೆ.

ಸರ್ವೋಪಕಾರಕವಾದ ಈ ಆಗಮಗಳಲ್ಲಿ ವೀರಶೈವಾಗಮವೂ ಒಂದಾಗಿದೆ. ಈ ಆಗಮಕ್ಕನುಸಾರವಾಗಿ ಶ್ರೀಶೈಲ, ಮುಡುಕುತೊರೆ ಮೊದಲಾದ ಕ್ಷೇತ್ರಗಳಲ್ಲಿ ಅನಾದಿಕಾಲದಿಂದ ಸ್ಥಾವರ ಲಿಂಗಾರ್ಚನೆಯ ಸಂಪ್ರದಾಯ ಲೋಕಾಭ್ಯುದಯಕ್ಕಾಗಿಯೂ, ಭಕ್ತಿ ತತ್ವಪ್ರಚಾರಕ್ಕಾಗಿಯೂ ನಡೆಯುತ್ತಾ ಬರುತ್ತಿರುವುದು ಸರ್ವವಿದಿತವಾಗಿದೆ. ಈ ಆಗಮಕ್ಕನುಸಾರವಾಗಿ ರೂಢಿಯಲ್ಲಿರುವ ಆಗಮಪ್ರಯೋಗವನ್ನು ಕ್ರಿಯಾಸಾರಾದಿ ಗ್ರಂಥಗಳ ನಿರೂಪಣೆಗನುಸಾರವಾಗಿ ಸಮಗ್ರವಾಗಿ ಸಂಪಾದಿಸಿ ಮಹೋಪಕಾರ ಮಾಡಿದ್ದಾರೆ ಸುಪ್ರಸಿದ್ಧ ವಿದ್ವಾಂಸರಾದ ಶ್ರೀಮಾನ್ ಎಂ. ಜಿ. ನಂಜುಂಡಾರಾಧ್ಯರು. ಈಗಾಗಲೇ ಇವರು ಪ್ರಕಟಿಸಿರುವ 'ವೀರಶೈವ ಪೂರ್ವಪ್ರಯೋಗರತ್ನ' ಸರ್ವೋಪಕಾರಕವಾಗಿ ಜನಮನ್ನಣೆಯನ್ನು ಪಡೆದಿದೆ. ಪ್ರಕೃತ ಗ್ರಂಥವಾದ 'ವೀರಶೈವಾಗಮ ಪ್ರಯೋಗರತ್ನ' ಅತ್ಯಂತ ಮಹತ್ವಪೂರ್ಣವಾದುದಾಗಿದೆ. ಇದರಲ್ಲಿ ಪ್ರತಿಷ್ಠಾ ಪ್ರಕರಣ, ಮಹೋತ್ಸವ ಪ್ರಕರಣ, ಶಾಂತಿ ಪ್ರಕರಣ, ಧರ್ಮಾಧಿಕಾರ ಪ್ರಕರಣ ಮತ್ತು ಉಪಾಸನಾ ಪ್ರಕರಣ ಎಂಬ ಐದು ಪ್ರಕರಣಗಳಿವೆ. ಶಿವಲಿಂಗಾದಿ ಪ್ರತಿಷ್ಠಾ ಪ್ರಯೋಗಗಳನ್ನೂ, ಆಲಯಗಳಲ್ಲಿ ನಡೆವ ಗಿರಿಜಾ ಕಲ್ಯಾಣಾದಿ ಪ್ರಯೋಗಗಳನ್ನೂ, ವಿನಾಯಕ ಶಾಂತ್ಯಾದಿ ಕ್ರಮಗಳನ್ನೂ,

ಗುರುಪಟ್ಟಾಧಿಕಾರ ಕ್ರಮಗಳನ್ನೂ, ವರಸಿದ್ಧಿವಿನಾಯಕ ಪೂಜಾಕಲ್ಪಾದಿಗಳನ್ನೂ ಕ್ರಮವಾಗಿ ಇಲ್ಲಿ ನಿರೂಪಿಸಿದ್ದಾರೆ. ಈ ಪ್ರಯೋಗಗಳಲ್ಲಿ ಬಳಸಬೇಕಾದ ಸೂಕ್ತಗಳನ್ನೆಲ್ಲಾ ಸಸ್ವರವಾಗಿ ಅನುಬಂಧದಲ್ಲಿ ಕೊಟ್ಟಿರುವುದು ಗ್ರಂಥದ ಪ್ರಯೋಜನವನ್ನು ಅಧಿಕಗೊಳಿಸಿದೆ. ಪಾರಿಭಾಷಿಕ ಶಬ್ದಗಳ ನಿರೂಪಣೆ ಸಮಗ್ರವಾಗಿಯೂ ಶಾಸ್ತ್ರೀಯವಾಗಿಯೂ ಇದ್ದು ಅವುಗಳ ಮಹತ್ವವನ್ನು ತಿಳಿಯಪಡಿಸುತ್ತವೆ. ವಿವಿಧ ಪ್ರಯೋಗಗಳಿಗೆ ಬೇಕಾದ ಸಾಮಗ್ರಿಗಳ ಪಟ್ಟಿಕೆಯನ್ನು ಕೊಟ್ಟಿರುವುದು ಆಗಮಿಕರಿಗೂ ಪುರೋಹಿತವರ್ಗಕ್ಕೂ ಉಪಕಾರಕವಾಗಿದೆ. ಶಾಂಭವೀಚಕ್ರ, ಬಲಿಮಂಡಲ, ಅಷ್ಟಮಂಗಳ ಮೊದಲಾದವುಗಳ ಚಿತ್ರಗಳನ್ನು ಕೊಟ್ಟಿರುವುದು ಬಹಳ ಬೋಧಪ್ರದವಾಗಿದೆ. ಆಗಮಗಳ ಅಧ್ಯಯನ ಮತ್ತು ಸಂಶೋಧನೆ ವಿರಳವಾಗಿರುವ ಈ ಕಾಲದಲ್ಲಿ ಇಂಥ ಸರ್ವಾಂಗ ಸುಂದರವೂ ಅತ್ಯಂತ ಪ್ರಯೋಜಕವೂ ಆದ ಕೃತಿಯೊಂದನ್ನು ಶಾಸ್ತ್ರೀಯವಾಗಿ, ಸಪ್ರಮಾಣವಾಗಿ, ಸಂಪ್ರದಾಯಕ್ಕನುಗುಣವಾಗಿ ಸಂಪಾದಿಸಿ ಪ್ರಕಟಿಸುತ್ತಿರುವ ಲೇಖಕರನ್ನು ನಾವು ಎಷ್ಟು ಅಭಿನಂದಿಸಿದರೂ ಸಾಲದು. ಈ ಉಪಯುಕ್ತ ಕೃತಿಗೆ ಲೇಖಕರು ವಿದ್ವತ್ಪೂರ್ಣವಾದ ಪೀಠಿಕೆಯನ್ನು ರಚಿಸಿ ಆಗಮ ಸಂಪ್ರದಾಯದ ಮಹತ್ವ, ವೀರಶೈವಾಗಮದ ವೈಶಿಷ್ಟ್ಯ, ಸ್ಥಾವರ ಲಿಂಗಾರ್ಚನೆಯ ಆವಶ್ಯಕತೆ ಮೊದಲಾದುವನ್ನು ಸಪ್ರಮಾಣವಾಗಿ ನಿರುಪಿಸಿರುವುದು ಬಹಳ ಶ್ಲಾಘ್ಯವಾಗಿದೆ. ಮಾನ್ಯ ಲೇಖಕರ 'ವೀರಶೈವ ಪೂರ್ವಪ್ರಯೋಗರತ್ನ' ಮತ್ತು 'ವೀರಶೈವಾಗಮ ಪ್ರಯೋಗರತ್ನ' ಎಂಬ ಈ ಎರಡು ಕೃತಿರತ್ನಗಳು ವೀರಶೈವ ಸಂಪ್ರದಾಯದ ಆಗಮಪ್ರಯೋಗಗಳನ್ನೆಲ್ಲಾ ಸಮಗ್ರವಾಗಿ ನಿರೂಪಿಸುವುವಾಗಿ ಸಮಾಜಕ್ಕೆ ಮಹೋಪಕಾರಮಾಡಿವೆ.

ನಮ್ಮ ಮಹಾಪಾಠಶಾಲೆಯಲ್ಲಿ ನಡೆಯುತ್ತಿರುವ ವೀರಶೈವಾಗಮ ತರಗತಿಗಳಿಗೆ ಇವರ ಈ ಕೃತಿ ಪ್ರತ್ಯಗ್ರಂಥವಾಗಿದೆ. ಇದುವರೆಗೆ ಅಮುದ್ರಿತವಾಗಿದ್ದ ಈ ಕೃತಿಯನ್ನು ಈಗ ಪ್ರಕಾಶಪಡಿಸಿ ಆ ವೀರಶೈವಾಗಮ ವಿದ್ಯಾರ್ಥಿಗಳಿಗೂ ಉಪಾಧ್ಯಾಯರಿಗೂ ಈ ಕೃತಿ ಲಭಿಸುವಂತೆ ಮಾಡಿರುವುದಕ್ಕಾಗಿ ಆಗಮ ವಿದ್ಯಾಸಲಹಾಸಮಿತಿಯ ಪರವಾಗಿ ಮಾನ್ಯ ಲೇಖಕರನ್ನು ನಾನು ವಂದಿಸುತ್ತೇನೆ.

ವಿದ್ವಾನ್ ನಂಜುಂಡಾರಾಧ್ಯರು ನಮ್ಮ ಮಹಾಪಾಠಶಾಲೆಯಲ್ಲಿ ವೀರಶೈವಾಗಮ ಪ್ರಾಧ್ಯಾಪಕರಾಗಿದ್ದು ಅಪಾರವಾದ ಅನುಭವವುಳ್ಳವರು. ಈಗ ವೇದಾಂತ ಪ್ರಾಧ್ಯಾಪಕರಾಗಿ ವೇದಾಂತಶಾಸ್ತ್ರಸಾರಾರ್ಥವನ್ನು ಬೋಧಿಸುತ್ತಿರುವರು. ಸಮಾಜದ ಮಾರ್ಗದರ್ಶನಕ್ಕಾಗಿ ಹಾಗೂ ಪ್ರಯೋಜನಕ್ಕಾಗಿ ಇಂಥ ಕೃತಿಗಳನ್ನು ರಚಿಸಲು ಅವರಿಗಿಂತ ಉತ್ತಮರಾದ ಅಧಿಕಾರಿಗಳು ದೊರೆಯಲಾರರು. ಬಹಳ ಶ್ರದ್ಧೆ ಮತ್ತು ಪರಿಶ್ರಮದ ಫಲವಾಗಿ ಬಂದಿರುವ 'ವೀರಶೈವಾಗಮಪ್ರಯೋಗರತ್ನ'ದ ಪ್ರಯೋಜನವನ್ನು ಎಲ್ಲರೂ ಪಡೆಯುವಂತಾಗಲೆಂದೂ ಇಂಥ ಕೃತಿಗಳು ಅನೇಕವಾಗಿ ಮಾನ್ಯ ಲೇಖಕರಿಂದ ಬರುವಂತಾಗಲೆಂದೂ ಹಾರೈಸುತ್ತೇನೆ.

ಎ. ಎಸ್. ಅನಂತರಂಗಾಚಾರ್
ಪ್ರಿನ್ಸಿಪಾಲ್
ಶ್ರೀಮನ್ಮಹಾರಾಜ ಸಂಸ್ಕೃತ ಮಹಾಪಾಠಶಾಲಾ
ಮತ್ತು ಕಾರ್ಯದರ್ಶಿ
ಆಗಮವಿದ್ಯಾ ಸಲಹಾ ಸಮಿತಿ,
ಮೈಸೂರು.

ಮೈಸೂರು
೮-೪-೧೯೬೮

# ಶ್ರೀಮನ್ಮಹಾರಾಜರವರ ಸಂದೇಶ

ದೇವರಿದ್ದಾನೆ; ಧರ್ಮಕರ್ಮಗಳು, ಪುಣ್ಯಪಾಪಗಳು ಉಂಟು; ಎಂದು ನಂಬಿ ಸನ್ಮಾರ್ಗದಲ್ಲಿ ನಡೆಯುವುದು ಆಸ್ತಿಕತ್ವ. ದೇವರಿಲ್ಲ, ಧರ್ಮ ಕರ್ಮಗಳೂ ಪುಣ್ಯಪಾಪಗಳೂ ಇಲ್ಲ ಎಂದು ಮನಬಂದಂತೆ ನಡೆಯುವುದು ನಾಸ್ತಿಕತ್ವ. "ಒಮ್ಮೆ ದೇವರಿಲ್ಲದಿದ್ದರೂ ಆಸ್ತಿಕನಾದವನು ಸನ್ಮಾರ್ಗದಲ್ಲಿ ರುವುದರಿಂದ ಅವನಿಗೆ ಯಾವ ತೊಂದರೆಯೂ ಇಲ್ಲ. ಅಕಸ್ಮಾತ್ ದೇವರಿದ್ದ ಪಕ್ಷದಲ್ಲಿ ನಾಸ್ತಿಕನ ಗತಿಯೇನು?"

ಈ ದೃಷ್ಟಿಯಿಂದ ಆಸ್ತಿಕತ್ವ ಮಾನವನ ಸುಸಂಸ್ಕೃತಿಯನ್ನು ಸೂಚಿಸುತ್ತದೆ. ದೈವಭಕ್ತಿ ಆಸ್ತಿಕತ್ವದ ಮೂಲ. ಭಗವಂತನು ಮಾನವನ ಧರ್ಮ ಕರ್ಮಗಳಿಗೆ ಪುಣ್ಯಪಾಪಗಳಿಗೆ ತಕ್ಕ ಫಲವನ್ನು ನೀಡುತ್ತಾನೆ ಎಂಬುದು ಎಲ್ಲ ಧರ್ಮಾಚಾರ್ಯರ ನಂಬುಗೆ.

ಭಗವಂತನ ಆರಾಧನೆಗಾಗಿ ಪುರಾತನ ಕಾಲದಿಂದಲೂ ಎಲ್ಲ ಧರ್ಮಗಳ ಆಚಾರ್ಯರು ಪ್ರವಾದಿಗಳು ಸಾಧುಸಂತರು ಆಯಾ ಸಂಪ್ರದಾಯದ ದೇವಾ ಲಯಗಳು ಪ್ರಾರ್ಥನಾಮಂದಿರಗಳನ್ನು ರಚಿಸಿಕೊಂಡು ಭಗವಂತನನ್ನು ಆರಾಧಿಸುತ್ತಾ ಬಂದಿದ್ದಾರೆ.

ವೇದಾಗಮೋಕ್ತವಾದ ದೇವತಾರಾಧನೆ ಭಾರತದಲ್ಲಿ ನಡೆಯುತ್ತಿದೆ. ಇಷ್ಟಲಿಂಗಪೂಜೆಗೆ ಪ್ರಾಧಾನ್ಯವನ್ನು ಕೊಟ್ಟಿರುವ ವೀರಶೈವವೂ ಕೂಡ ಜನ ಸಾಮಾನ್ಯರಲ್ಲಿ ದೈವಭಕ್ತಿಯನ್ನು ಮೂಡಿಸಲು ಮಠ ಮಂದಿರಗಳಲ್ಲಿ ದೇವತಾಮೂರ್ತಿಗಳ ಆರಾಧನೆಯನ್ನು ಕಡೆಗಣಿಸಿಲ್ಲ. ವೇದಾಗಮ ಶಾಸ್ತ್ರ ಗಳಲ್ಲಿ ವಿಶೇಷ ಅನುಭವವುಳ್ಳ ಶ್ರೀ ನಂಜುಂಡಾರಾಧ್ಯರು ಜನತೆಯ ಅಭಿರುಚಿಗೆ ಅನುಗುಣವಾಗಿ ಎಸಗುವ ವಿವಿಧ ದೇವತಾಪ್ರತಿಷ್ಠೆ, ಮಹೋತ್ಸವ ಮುಂತಾದ ಅನೇಕ ಪ್ರಕರಣಗಳಿಂದ ಕೂಡಿದ "ವೀರಶೈವಾಗಮ ಪ್ರಯೋಗ ರತ್ನ" ಎಂಬ ಉಪಯುಕ್ತ ಗ್ರಂಥವನ್ನು ರಚಿಸಿರುವುದು ಸ್ತುತ್ಯ. ಈ ಗ್ರಂಥವು ವೀರಶೈವ ಆಗಮಾಭ್ಯಾಸಿಗಳಿಗೆ ಮಾತ್ರವಲ್ಲದೆ ಎಲ್ಲ ಧರ್ಮಾಭಿಮಾನಿಗಳಿಗೂ ಅತ್ಯಾವಶ್ಯಕವೆಂದು ಭಾವಿಸಿ ಗ್ರಂಥಕರ್ತರನ್ನು ಅಭಿನಂದಿಸುತ್ತೇವೆ.

೨೩–೧೨–೧೯೬೮ ಶ್ರೀ ಜಯಚಾಮರಾಜ ಒಡೆಯರ್

# ಕೃತಜ್ಞತೆ

ವೀರಶೈವಾಗಮ ಪ್ರಯೋಗರತ್ನವನ್ನು ಆಮೂಲಾಗ್ರವಾಗಿ ಅವಲೋಕಿಸಿ ಆಶೀರ್ವದಿಸಿರುವ ಎಲ್ಲ ಗುರು-ಚರಮೂರ್ತಿಗಳು, ಶುಭ ಸಂದೇಶಗಳನ್ನು ನೀಡಿರುವ ಶ್ರೀಮನ್ಮಹಾರಾಜರು, ರಾಜ್ಯಪಾಲರು, ವಿದ್ಯಾಮಂತ್ರಿಗಳು ಮತ್ತು ಎಲ್ಲ ವಿದ್ವಾಂಸರಿಗೂ ಹಾಗೂ ಮೈಸೂರು ಶ್ರೀಮನ್ಮಹಾರಾಜ ಸಂಸ್ಕೃತ ಕಾಲೇಜಿನಲ್ಲಿ ನೆರವೇರಿದ ಈ ಗ್ರಂಥದ ಉದ್ಘಾಟನ ಸಮಾರಂಭದಲ್ಲಿ ಅಧ್ಯಕ್ಷತೆ ವಹಿಸಿರುವ ಶ್ರೀಮತ್ಸುತ್ತೂರು ವೀರಸಿಂಹಾಸನಾಧೀಶ್ವರ ಜಗದ್ಗುರು ಶ್ರೀ ಶ್ರೀ ಶಿವರಾತ್ರಿ ರಾಜೇಂದ್ರಮಹಾಸ್ವಾಮಿಗಳಿಗೂ ಗ್ರಂಥವನ್ನು ಆದರಪೂರ್ವಕವಾಗಿ ಉದ್ಘಾಟಿಸಿದ ಸಂಸ್ಥಾನದ ಮುಜರಾಯ್ ಮತ್ತು ಕಂದಾಯ ಸಚಿವರಾದ ಶ್ರೀ ಎಚ್. ವಿ. ಕೌಜಲಗಿಯವರಿಗೂ ಮತ್ತು ಗ್ರಂಥಕ್ಕೆ ಮುನ್ನುಡಿಯ ತಿಲಕವಿಟ್ಟು ಹರಸಿರುವ ಶ್ರೀಮನ್ಮಹಾರಾಜ ಸಂಸ್ಕೃತ ಕಾಲೇಜಿನ ಪ್ರಿನ್ಸಿಪಾಲರು, ಆಗಮ ವಿದ್ಯಾಸಲಹಾಸಮಿತಿಯ ಕಾರ್ಯದರ್ಶಿಗಳೂ ಆದ ಡಾ|| ಎನ್. ಎಸ್. ಅನಂತರಂಗಾಚಾರ್ಯರು, ಎಂ.ಎ., ಪಿ.ಎಚ್‌ಡಿ. ವಿದ್ವಾನ್‌ರವರು ಮತ್ತು ಶ್ರೀ ಬಿ. ಎಸ್. ಶಂಕರ ನಾರಾಯಣ, ಎಂ.ಎ., ಎಂ.ಇಡಿ., ಅವರಿಗೂ ಚಿರ ಋಣಿ.

ಮೈಸೂರು

೨೭-೧೨-೧೯೬೮

ಎಂ. ಜಿ. ಎನ್.

# ಉಪೋದ್ಘಾತ

ಸಂಸ್ಕಾರ ಜನ್ಯವಾದುದು ಸಂಸ್ಕೃತಿ. ಮಾನವನಿಗೂ ಮೃಗಕ್ಕೂ ಇರುವ ಅಂತರವನ್ನು ತೋರುವುದೇ ಇದರ ಲಕ್ಷಣ. ಜೀವನದ ವಿಕಾಸವೇ ಸಂಸ್ಕೃತಿ (culture). ನಾಗರಿಕತೆ (civilization) ಎಂಬುದು ಒಂದು ನಾಡಿನ ಅಥವಾ ವ್ಯಕ್ತಿಯ ಬಾಹ್ಯ ಸುಧಾರಣೆಯನ್ನು ಸೂಚಿಸುವ ಶಬ್ದ.

ಸಂಸ್ಕೃತಿಯು ಮಾನವನ ಅಂತಃಕರಣದಲ್ಲಿದ್ದು ಚಿತ್ತವೃತ್ತಿಯನ್ನೂ ಬುದ್ಧಿವ್ಯಾಪಾರವನ್ನೂ ರೂಪುಗೊಳಿಸುವ ಅಂತಸ್ಸತ್ವ. ಮಾನವನನ್ನು ಅನಾಗರಿಕತೆಯಿಂದ ನಿಜವಾದ ನಾಗರಿಕತೆಯ ಕಡೆಗೂ, ಕತ್ತಲಿನಿಂದ ಬೆಳಕಿನ ಕಡೆಗೂ ಮೃತ್ಯುವಿನಿಂದ ಅಮೃತತ್ವದ ಕಡೆಗೂ ಒಯ್ಯುವ ಮನಃ ಪರಿಪಾಕವೇ ಸಂಸ್ಕೃತಿ.

ಜಗತ್ತಿನಲ್ಲಿ ಮಾನವನ ಮನೋವಿಕಾಸವಾದಂದಿನಿಂದ ಇಂದಿನವರೆಗೆ ಜೀವನ ಸಂಸ್ಕರಣಕ್ಕೆ ಕಾರಣವಾದ ಅನೇಕ ಧರ್ಮಗಳಿವೆ. ಸಂಸ್ಕರಣ ಕಾರ್ಯದಲ್ಲಿ ಅಂದಂದಿಗೆ ವ್ಯವಸ್ಥಿತವಾದ ಕಟ್ಟುಕಟ್ಟಳೆಗಳ ಗುಂಪು ಧರ್ಮ. ಧರ್ಮವು ಜಗತ್‌ಸ್ಥಿತಿಯನ್ನು ಗೊತ್ತಾದ ನಿಯಮಗಳಿಂದ ಧರಿಸಿದೆ. "ಧಾರಣಾತ್ ಧರ್ಮಮಿತ್ಯಾಹುಃ" ಎಂಬುದು ಈ ಅರ್ಥವನ್ನು ಸಮರ್ಥಿಸುತ್ತದೆ. ಧರ್ಮದಿಂದಾದ ಫಲ ಸಂಸ್ಕೃತಿ.

ಲೋಕದಲ್ಲಿ ಮಾನವನ ಸಂಸ್ಕೃತಿಗೆ ಮೂಲವಾದ ಧರ್ಮಗಳಲ್ಲಿ ವೈದಿಕ ಧರ್ಮ ಮೊದಲಿನದು ಎಂದು ಪ್ರಾಜ್ಞರ ಅಭಿಪ್ರಾಯ. ಪ್ರಪಂಚದ ಪ್ರಮುಖವಾದ ಸಂಸ್ಕೃತಿಗಳಿಗೆ ವೈದಿಕಧರ್ಮ ಒಂದಲ್ಲ ಒಂದು ವಿಧವಾಗಿ ನೆರವಾಗಿದೆಯೆಂದು ಪ್ರಾಜ್ಞರು ಹೇಳಿದ್ದಾರೆ.

ಭರತಖಂಡದ ಅಧ್ಯಾತ್ಮಿಕ ಸಾಹಿತ್ಯದಲ್ಲಿ ಜ್ಞಾನಪ್ರಸಾರಕ್ಕಾಗಿ ಏರ್ಪಟ್ಟ ಸಾಹಿತ್ಯಗಳಲ್ಲಿ ವೇದಗಳನ್ನು ಬಿಟ್ಟರೆ ಆಗಮಗಳೇ ಅತ್ಯಂತ ಪುರಾತನವಾದವುಗಳು. ಆಗಮ ಸಂಸ್ಕೃತಿಯು ವೈದಿಕ ಸಂಸ್ಕೃತಿಗೆ ಸಮ ಇಲ್ಲವೆ ಪೂರಕವಾದುದೆನ್ನಬಹುದು.

## ಆಗಮ-ತಂತ್ರ

"ಆಗಮ" ಎಂಬ ಪದಕ್ಕೆ "ಬರು" ಎಂದು ಸಾಮಾನ್ಯವಾಗಿ ಅರ್ಥವಾ

ಗುತ್ತದೆ. ಗತ್ಯರ್ಥಕವಾದ "ಗಮ್" ಧಾತುವಿಗೆ "ಆಙ್" ಎಂಬ ಉಪಸರ್ಗ ಸೇರಿ "ಆ+ಗಮ" ಎಂದರೆ "ಪೂರ್ಣಜ್ಞಾನ" ಎಂದಾಗುತ್ತದೆ. 'ವೇದ' ಶಬ್ದಕ್ಕೂ ಸಹ 'ವಿದ್‌ಜ್ಞಾನೇ'ಎಂಬುದರಿಂದ 'ಜ್ಞಾನ'ವೆಂದೇ ಅರ್ಥ. ಆದುದರಿಂದ ಆಗಮವು ವೇದಗಳ ಉದ್ದೇಶವನ್ನೇ ನೆರವೇರಿಸುವುದಾಗಿದೆ. "ನಿಗಮಾಗಮ"ಗಳೆಂದು ವೇದಾಗಮಗಳನ್ನು ಕರೆಯುವುದುಂಟು. "ಯಸ್ಯ ನಿಶ್ವಸಿತಂ ವೇದಾಃ" ಎಂದರೆ ವೇದಗಳು ಯೋಗಸ್ಥರಾದ ಮಹರ್ಷಿಗಳ ಮುಖದಿಂಧ ನಿಶ್ವಸಿತಗಳಂತೆ ಅಪ್ರಯತ್ನವಾಗಿ ಹೊರಬಿದ್ದು ಅಪೌರುಷೇಯ ವೆನಿಸಿದರೆ ಆಗಮಗಳು ಪರಮಾತ್ಮನ ಸ್ಪಷ್ಟವಾಣಿಯೆನಿಸಿವೆ. ಆಗಮಗಳಿಗೆ "ತಂತ್ರ"ವೆಂಬ ಮತ್ತೊಂದು ಹೆಸರಿದೆ. ಸೂಕ್ಷ್ಮಾಗಮದಲ್ಲಿ "ಶ್ರುತಿ ತಂತ್ರ" ವೆಂದೇ ಪ್ರಯುಕ್ತವಾಗಿದೆ. "ತನುತೇ ವಿಸ್ತಾರ್ಯತೇ ಜ್ಞಾನಂ ಅನೇನ ತ್ರಾಯತೇ ಚ ಇತಿ ತಂತ್ರಮ್" ಎಂದರೆ ತಂತ್ರದಿಂದ ಮಾನವನ ಜ್ಞಾನವು ವಿಕಾಸವಾಗಿ ಆವನ ಉದ್ಧಾರವಾಗುವುದರಿಂದ ಇವಕ್ಕೆ ತಂತ್ರವೆಂಬ ಹೆಸರು ಅನ್ವರ್ಥಕ. "ಆಪ್ತೋಕ್ತಿರಾಗಮಸ್ತೋಽಪಿ" ಎಂಬ ಪೌಷ್ಕರ ಸಂಹಿತೆಯ ವಚನದಂತೆ ಆಗಮವು ಈಶ್ವರ ವಚನ. "ವೈದಿಕೀ ತಾಂತ್ರಿಕೀ ಚೈವ ದ್ವಿವಿಧಾ ಶ್ರುತಿ ಕೀರ್ತಿತಾ" (ಮನುಸ್ಮೃತಿ ವ್ಯಾಖ್ಯಾನ) ಎಂಬ ಉಕ್ತಿಯಂತೆ ಆಗಮಗಳಿಗೂ ಸಹ"ಶ್ರುತಿ"ಯೆಂಬ ವ್ಯವಹಾರವಿದೆ.

## ವೇದ-ಆಗಮ

ಶೈವಸಿದ್ಧಾಂತ ಪರಿಭಾಷೆಯಲ್ಲಿ ಆಗಮಗಳು ವೇದ ಸಾರವೆಂದೇ ಹೇಳಲಾಗಿದೆ. "ಶ್ರೂಯತೇ ಹಿ ವೇದಸಾರಃ ಶಿವಾಗಮಃ" ಎಂಬುದು ಇದನ್ನು ಸಮರ್ಥಿಸುತ್ತದೆ. ಶ್ರೀಕರ ಭಾಷ್ಯದ ಶಾಸ್ತ್ರಯೋನಿತ್ವಾಧಿಕರಣದಲ್ಲಿ ಪರಮೇಶ್ವರನಿಗೆ ಸರ್ವವಿದ್ಯಾಕರ್ತೃತ್ವವನ್ನು ಪ್ರತಿಪಾದಿಸುವಲ್ಲಿ

ಅಷ್ಟಾದಶಾನಾಮೇತಾಸಾಂ ವಿದ್ಯಾನಾಂ ಬ್ರಹ್ಮವರ್ತ್ಮನಾಂ ।
ಆದಿಕರ್ತಾ ಶಿವಃ ಸಾಕ್ಷಾತ್ ಶೂಲಪಾಣಿರಿತಿ ಸ್ಥಿತಿಃ ॥

ವಿಮರ್ಶರೂಪಿಣೀ ಶಕ್ತಿಃ ಶಿವಸ್ಯ ಪರಮಾತ್ಮನಃ ।
ನಿಗಮಾಗಮ ರೂಪಸ್ಸಾ ಸೈತ್ ಸರ್ವತತ್ತ್ವಪ್ರಕಾಶಿನೀ ॥

—ಶ್ರೀಕರಭಾಷ್ಯ ಅ. ೩ ಪು. ೩೭

ಎಂದು ಪರಶಿವನಿಗೆ ನಿಗಮಾಗಮ ಕರ್ತೃತ್ವವನ್ನು ನಿರೂಪಿಸಲಾಗಿದೆ. ಶ್ರೀಕಂಠ ಶಿವಾಚಾರ್ಯರು ಆಗಮ ಮತ್ತು ವೇದಗಳಿಗೆ ಸಮಪ್ರಾಮಾಣ್ಯವನ್ನು ಸ್ಥಾಪಿಸುವುದಕ್ಕಾಗಿಯೇ ಬ್ರಹ್ಮಸೂತ್ರಗಳಿಗೆ ಭಾಷ್ಯ ಬರೆದಿರುವರೆಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ.೧ **"ವೇದಾಗಮಯೋಃ ಭೇದಂ ನ ಪಶ್ಯಾಮಃ"** ಎಂಬ ಶ್ರೀಕಂಠ ಶಿವಾಚಾರ್ಯರ ಉಕ್ತಿ ಇದನ್ನು ಸಮರ್ಥಿಸುತ್ತದೆ. ಆಗಮ ಸಂಸ್ಕೃತಿಯು ವೇದೋಪನಿಷತ್ತುಗಳಲ್ಲಿ ಹೇಳಿದ ಧ್ಯೇಯಗಳನ್ನು ಕೈವಶಮಾಡಿಕೊಳ್ಳಲು ಹೊರಟ ಸಾಧನ ಶಾಸ್ತ್ರವೆಂದು ಹೇಳಲಾಗಿದೆ. ಮೇಲಾಗಿ ಆಗಮಗಳು ವೇದಗಳಲ್ಲಿ ಬರುವ ಹಿಂಸಾತ್ಮಕವೂ ಸ್ವರ್ಗಾದಿ ಅಲ್ಪಫಲ ಜನಕವೂ ಆದ ಕರ್ಮಭಾಗವನ್ನು ತ್ಯಾಗಮಾಡಿ ಭಕ್ತಿ-ಜ್ಞಾನ-ವೈರಾಗ್ಯ-ತಪಸ್ಸು ಮುಂತಾದವುಗಳಿಂದ ಆತ್ಮನ ಸಂಸ್ಕರಣದಲ್ಲಿ ಉದಾತ್ತ ಮಾರ್ಗವನ್ನು ಅವಲಂಬಿಸಿವೆಯೆನ್ನಬಹುದು.

## ಆಗಮ ವಿಭಾಗಗಳು

ಆಗಮಗಳು ಶೈವ, ಶಾಕ್ತ ಮತ್ತು ವೈಷ್ಣವ ಎಂದು ಮೂರು ತೆರನಾಗಿವೆ. ಆಯಾ ಮತಗಳು ಆವಿರ್ಭವಿಸುವ ಕಾಲದಲ್ಲಿ ಆ ಆಗಮಗಳ ಉದಯವಾಯಿತೆಂದು ಬೇರೆ ಹೇಳಬೇಕಾಗಿಲ್ಲ.

ಪಾಂಚರಾತ್ರಾಗಮವು ೧೦೮ ಪ್ರಭೇದಗಳುಳ್ಳದ್ದೆಂದೂ ಶಾಕ್ತತಂತ್ರವು ೬೪ ಪ್ರಭೇದಗಳುಳ್ಳದ್ದೆಂದೂ ತಿಳಿದುಬಂದಿದೆ. ಸಮ್ಮೋಹನ ತಂತ್ರದ ೬ನೆಯ ಅಧ್ಯಾಯದಲ್ಲಿ ಶಾಕ್ತತಂತ್ರಗಳು ೬೪, ಉಪತಂತ್ರಗಳು ೩೨೭, ಶೈವತಂತ್ರಗಳು ೨೮, ಉಪತಂತ್ರಗಳು ೧೨೭, ವೈಷ್ಣವತಂತ್ರಗಳು ೭೫, ಉಪತಂತ್ರಗಳು ೨೦೫ ಇವೆಯೆಂದು ಹೇಳಿದೆ.೨

## ವೈದಿಕ ಅವೈದಿಕ ಆಗಮಗಳು

ಜಗದ್ಗುರು ರೇಣುಕಾಚಾರ್ಯರು ಪಾಂಚರಾತ್ರ ಮತ್ತು ಪಾಶುಪತ ಪಂಥಗಳ ವಿಚಾರವನ್ನೆತ್ತಿ ಪಾಂಚರಾತ್ರವು ವೇದದ ಕೆಲವು ಭಾಗಗಳನ್ನು

---

೧ಶ್ರೀ ಎಸ್. ಎಸ್. ಸೂರ್ಯನಾರಾಯಣಶಾಸ್ತ್ರೀ (ಶ್ರೀಕಂಠಾಸ್ ಶಿವಾದ್ವೈತ).

೨ಸಮರ್ಪಣೆ (ಧರ್ಮಸ್ಥಳದ ಶ್ರೀ ಮಂಜಯ್ಯ ಹೆಗ್ಗಡೆಯವರಿಗೆ) ಪು. ೩೮೧ ೧೯೫೦).

ಮಾತ್ರ ಮಾನ್ಯಮಾಡುವುದೆಂದೂ, ಶೈವವು [ಪಾಶುಪತ] 'ವೇದಮಯ' ವೆಂದೂ ಹೇಳಿದ್ದಾರೆ. [ಸಿ. ಶಿ. ಪ. ೫-೬] 'ಸರ್ವವೇದಾನುಸಾರಿ'ಯಾದ ಶೈವಾಗಮಗಳಿಗೆ "ಸಿದ್ಧಾಂತಾಗಮ"ವೆಂದು ಹೆಸರು. "**ಸರ್ವವೇದಾರ್ಥ ಸಾರತ್ವಾತ್ ಪ್ರಾಮಾಣ್ಯಂ ವೇದವತ್ಸದಾ**" ಎನ್ನಲಾಗಿದೆ.

ಇವಲ್ಲದೆ **ವಾಮ, ಲಾಕುಳ, ದಕ್ಷಿಣ** ಮತ್ತು ಮಿಶ್ರವೆಂಬ ಪ್ರಭೇದ ಗಳೂ ಇವೆ. ವಾಮವು ಶಕ್ತಿಪ್ರಧಾನ. ದಕ್ಷಿಣವು ಭೈರವಾತ್ಮಕ. ಸಪ್ತಮಾತೃ ಪ್ರಧಾನವಾದುದು ಮಿಶ್ರ.

ಸಿದ್ಧಾಂತಾಖ್ಯೇ ಮಹಾತಂತ್ರೇ ಕಾಮಿಕಾದ್ಯೇ ಶಿವೋದಿತೇ ।
ನಿರ್ದಿಷ್ಟಮುತ್ತರೇ ಭಾಗೇ **ವೀರಶೈವಂ** ಮತಂ ಪರಮ್ ॥

(ಸಿ. ಶಿ. ಪ. ೫)

ಸಿದ್ಧಾಂತವೆನಿಸಿದ ಶೈವತಂತ್ರವನ್ನುಳಿದು ವಾಮಾಚಾರವನ್ನು ಹೇಳುವ **ಕಾಪಾಲ, ಲಾಕುಲ, ವಾಮ, ಭೈರವಾದಿಗಳು** ಅವೈದಿಕಗಳು. ಪಾಶು ಪತದಲ್ಲಿ ವೈದಿಕ ಮತ್ತು ಅವೈದಿಕವೆಂದು ಇಬ್ಬಗೆ. (ಕೂರ್ಮ ಪುರಾಣ ಅ. ೧೬) ಇದಕ್ಕೆ **ಶ್ರೌತ-ಅಶ್ರೌತ**ವೆಂದೂ ಹೆಸರು. ಸನತ್‌ಕುಮಾರ ಸಂಹಿತೆ ಯಲ್ಲಿ

ಶಿವಾಗಮೋಽಪಿ ದ್ವಿವಿಧಃ ಶ್ರೌತೋಽಶ್ರೌತಶ್ಚ ಸಂಸ್ಕೃತಃ ।
ಶ್ರುತಿಸಾರಮಯಃ ಶ್ರೌತಃ ಸ್ವತಂತ್ರಸ್ತ್ವಿತರೋ ಮತಃ ॥

ಎಂದು ಹೇಳಿದೆ. ಶ್ರೀಕರ ಭಾಷ್ಯದಲ್ಲಿ ಪಾಶುಪತವರ್ಣನವು ಹೀಗಿದೆ.

ದ್ವಿಧಾ ಪಾಶುಪತಂ ಜ್ಞೇಯಂ ಪೂರ್ವಾಪರವಿಭೇದತಃ ।
ಶಿವಾಗಮಾನುಸಾರೇಣ ಭಸ್ಮರುದ್ರಾಕ್ಷಧಾರಣಮ್ ॥

ಲಬ್ಧ್ವಾ ಶಿವಂ ಮಹಾದೇವಂ ಲಿಂಗರೂಪಮುಮಾಪತಿಮ್ ॥
ಅರ್ಚಯೇತ್ತು ತ್ರಿಕಾಲಂ ವೈ ಪೂರ್ವಪಾಶುಪತಂ ತತ್ ।
ನಿಗಮಾಗಮಾನುಸಂಧಾನ ಶೈವದೀಕ್ಷಾವಿಧಾನತಃ ॥

ಶಿವಲಿಂಗಂ ಕರೇ ಕಂಠೇ ಧೃತ್ವಾ ವಕ್ಷಸ್ಥಲೇಽಪಿ ವಾ ।
ತ್ರಿಕಾಲಂ ಯೋಽರ್ಚಯೇದ್ಭಕ್ತ್ಯಾ **ಮಹಾಪಾಶುಪತೋಽಹಿ** ಸಃ॥

ನಿಟ್ಟೂರು ನಂಜಣಾಚಾರ್ಯನು (ಕ್ರಿ. ಶ. ೧೭೩೫) ವೀರಶೈವರನ್ನು

ಮಹಾಪಾಶುಪತನೆಂದು ಕರೆದಿದ್ದಾನೆ. ಸುಪ್ರಸಿದ್ಧ ಕವಿ ಲಕ್ಕಣ್ಣ ದಂಡೇಶನು ತನ್ನ ಗುರುವಾದ ಮಲ್ಲಿಕಾರ್ಜುನನ್ನು "ಪಾಶುಪತಸದ್ವ್ರತಾಗ್ರಣಿ" (ಶಿವ ತತ್ವಚಿಂತಾಮಣಿ) ಎಂದಿದ್ದಾನೆ.

## ಆಗಮಗಳ ಕಾಲ

ಆಗಮಗಳಲ್ಲಿ ಉಕ್ತವಾದ ಭಾಷೆ ಮತ್ತು ಆಚಾರ ವಿಚಾರಗಳನ್ನು ಪರಿಶೀಲಿಸಿದರೆ ಅವು ತೀರ ಇತ್ತೀಚೆಗೆ ರಚಿತವಾದವುಗಳೆಂದು ತಿಳಿದುಬರುತ್ತದೆ. ಆದರೂ ಆಗಮಸಂಪ್ರದಾಯವು ಅತ್ಯಂತ ಪ್ರಾಚೀನವಾದುದೆಂಬುದರಲ್ಲಿ ಸಂದೇಹವಿಲ್ಲ. ಪಾಂಚರಾತ್ರಾಗಮೋಕ್ತವಾದ ಪೂಜಾವಿಧಾನವು ಕ್ರಿ. ಪೂ. ೨ನೇ ಶತಮಾನದ್ದೆಂದು ಹೇಳುವ ಮಹಾಭಾರತದ ಶಾಂತಿಪರ್ವ ೩೩೭ನೇ ಅಧ್ಯಾಯದಲ್ಲಿ ಹೇಳಿದೆ. ಕ್ರಿ. ಪೂ. ೫ನೇ ಶತಮಾನದ್ದೆಂದು ಹೇಳಲಾಗಿರುವ ಭಗವದ್ಗೀತೆಯಲ್ಲಿ ಪಾಂಚರಾತ್ರಗಮೋಕ್ತ ವಾಸುದೇವ ಮಹತ್ವವಿದೆ. ಪಾಂಚರಾತ್ರರಿಗೆ ಸಂಜ್ಞೆಯೆನಿಸಿರುವ "ಸಾತ್ವತ" ಎಂಬ ಪದವು ಐತರೇಯ ಮತ್ತು ಶತಪಥಬ್ರಾಹ್ಮಣಗಳಲ್ಲಿ ಕಂಡುಬರುತ್ತದೆ. ಅಲ್ಲದೆ ಭಗವದ್ಗೀತೆಯಲ್ಲಿ ಅನೇಕ ಶಿವಾಗಮಗಳ ಅವತರಣಗಳು ಸ್ಪಷ್ಟವಾಗಿ ಕಂಡುಬರುತ್ತವೆ.* ಈ ಎಲ್ಲ ಕಾರಣಗಳಿಂದ ಪಾಂಚರಾತ್ರಾಗಮಗಳು ಕ್ರಿ. ಪೂ. ೧ಳ ಶತಮಾನಗಳಷ್ಟು ಹಳೆಯವೆಂದೂ, ಶೈವಾಗಮ ಶಾಖೆ ಅದಕ್ಕಿಂತ ಹಿಂದಿನದೆಂದೂ ಸುಪ್ರಸಿದ್ಧ ಸಂಶೋಧಕರಾದ ಮಲ್ಲಾದಿ ಸೂರ್ಯನಾರಾಯಣ ಶಾಸ್ತ್ರಿಗಳು ಹೇಳುತ್ತಾರೆ.[೧] ಮೊಹೆಂಜೋದಾರೊ ಕಣಿವೆಯಲ್ಲಿ ದೊರೆತಿರುವ ಶಿವಲಿಂಗಗಳಿಂದ ಶೈವ ಸಂಸ್ಕೃತಿಯು ವೇದಕಾಲಕ್ಕಿಂತ ಹಿಂದಿನದೆಂದು ದೃಢಪಡುತ್ತದೆ.

## ಆಗಮೋಕ್ತ ವಿಷಯಗಳು

ಆಗಮಗಳಲ್ಲಿ ಕ್ರಿಯಾ, ಚರ್ಯಾ, ಯೋಗ ಮತ್ತು ಜ್ಞಾನ (ವಿದ್ಯಾ) ಎಂದು ನಾಲ್ಕು ಪಾದಗಳಿರುತ್ತವೆ. ಈಗ ದೊರೆಯುವ ಆಗಮಗಳಲ್ಲಿ

---

*ಗೀತೆ ಅಂತರ್ವಾಣಿ ಅನುಬಂಧ ಪು. ೩೩೩

೧ ಆಂಧ್ರ ಸಂವತ್ಸರಾದಿ ಸಂಚಿಕೆ (ಪಾರ್ಥಿವ) ಸಂಸ್ಕೃತ ವಾಙ್ಮಯ ಚರಿತ್ರೆ ಪು. ೮೧

ಕೆಲಕೆಲವು ಪಾದಗಳು ಮಾತ್ರ ದೊರೆಯುತ್ತವೆ. ಆಗಮಗಳಲ್ಲಿ ಉಕ್ತವಾದ ವಿಷಯಗಳನ್ನು ಮುಂದೆ ಕಂಡಂತೆ ವಿಂಗಡಿಸಬಹುದು.

**ಕ್ರಿಯಾಪಾದ**—ಇದರಲ್ಲಿ ದೇವಸ್ಥಾನಗಳ ಸ್ಥಾಪನ, ವಿಗ್ರಹರಚನ, ವಿಗ್ರಹಪ್ರತಿಷ್ಠೆ ಮುಂತಾದವುಗಳಿಗೆ ಸಂಬಂಧಿಸಿದ ವಿಷಯಗಳಿರುವುದಲ್ಲದೆ ವೀರಶೈವರ ಕೆಲವು ವಿಧಿವಿಧಾನಗಳೂ ಕಂಡುಬರುತ್ತವೆ. ಸುಪ್ರಭೇದ ಮತ್ತು ಕಾಮಿಕಗಳಲ್ಲಿ ದೇವಸ್ಥಾನಗಳ ರಚನೆಯ ವಿಚಾರವು ವಿಪುಲವಾಗಿದೆ. ಗುಡಿಗಳನ್ನು ಸೃಷ್ಟಿ ಸೌಂದರ್ಯವುಳ್ಳ ಸ್ಥಳಗಳಲ್ಲಿ ಕಟ್ಟಬೇಕು. ಮೊದಲು ಆ ಸ್ಥಳವನ್ನು ಉತ್ತು ಹದಮಾಡಿ ಬೀಜ ಬಿತ್ತಿ ಬಂದ ಬೆಳೆಯನ್ನು ಪಶುಪಕ್ಷಿಗಳಿಗೆ ತಿನ್ನಬಿಟ್ಟು ಅಲ್ಲಿ ದೇವಾಲಯವನ್ನು ಕಟ್ಟಬೇಕು. ಶುಭ ಮುಹೂರ್ತದಲ್ಲಿ ಶಂಕುಸ್ಥಾಪನೆ ಬಲಿಹರಣಗಳಾಗಬೇಕು.

ದೇವಾಲಯ ನಿರ್ಮಾಣವು ಜನಸಾಮಾನ್ಯರಲ್ಲಿ ಭಕ್ತಿ ಪ್ರಚೋದನೆಗಾದರೂ ಅವುಗಳಿಂದ ಶಿಲ್ಪಶಾಸ್ತ್ರಕ್ಕೆ ಉತ್ತೇಜನ ದೊರೆಯಿತು. ಶಿಲ್ಪಶಾಸ್ತ್ರದ ಉಗಮಕ್ಕೆ ಆಗಮಗಳೇ ಮೂಲ. ವೈದಿಕ ಸಾಹಿತ್ಯದಲ್ಲಿ ಶಿಲ್ಪಕ್ಕೆ ಅವಕಾಶವೇ ಇರಲಿಲ್ಲ. ಮೂರ್ತಿ ಪೂಜಾವಿಧಾನಕ್ಕೆ ಆಗಮಗಳೇ ಆಕರ. ಆದುದರಿಂದ ಆಗಮೋಕ್ತವಾದ ಶಿಲ್ಪವೈಭವಕ್ಕೆ **ಎಲ್ಲೋರ, ಅಜಂತ, ಬೇಲೂರು, ಹಳೇಬೀಡು, ಬಾದಾಮಿ** ಮುಂತಾದ ಕಡೆಯಿರುವ ಜಗತ್ಪ್ರಸಿದ್ಧ ದೇವಾಲಯಗಳೇ ಸಾಕ್ಷಿ. ಇವುಗಳಲ್ಲಿ ಜೈನ, ಬೌದ್ಧ ಸಂಸ್ಕೃತಿಗೆ ಸಂಬಂಧಿಸಿದವುಗಳೂ ಇವೆ.

ದೇವಾಲಯಗಳ ರಚನೆಯಲ್ಲಿ, ಗರ್ಭನ್ಯಾಸ, ಪೀಠ, ಕಂಠ, ಮಂಟಪ, ಪ್ರಾಕಾರ ಮುಂತಾದ ವಿಷಯಗಳೂ ಸಹ ಅಚ್ಚುಕಟ್ಟಾಗಿ ಹೇಳಿವೆ. ಮನಸ್ಸಿನ ಏಕಾಗ್ರತೆಯನ್ನು ಸಾಧಿಸಲಿಕ್ಕೆ ವಿಗ್ರಹಕ್ಕಿಂತ ಉತ್ತಮ ಸಾಧನವು ಮತ್ತೊಂದಿಲ್ಲವೆಂದು ಸ್ವಾಮಿ ವಿವೇಕಾನಂದರೂ ಹೇಳಿದ್ದಾರೆ.* ವಿಗ್ರಹಗಳಲ್ಲಿ **ಚಲ, ಅಚಲ** ಮುಂತಾದ ಅನೇಕ ಪ್ರಭೇದಗಳಿವೆ. ಸ್ವಯಂಭುಗಳೆನಿಸಿದ ಜ್ಯೋತಿರ್ಲಿಂಗಗಳಲ್ಲದೆ **ದೇವ, ಋಷಿ, ಮಾನುಷ** ನಿರ್ಮಿತ ಮುಂತಾದ ಅನೇಕ ವಿಭೇದಗಳೂ ಇವೆ.

**ಚರ್ಯಾಪಾದ**—ಇದರಲ್ಲಿ ಮಾನವರು ಸ್ಥಾಪಿಸಿದ ವಿಗ್ರಹಗಳನ್ನು

---

*ಹಿಂದೂ ಧರ್ಮಸಾರ ಪು. ೨೫

ಪ್ರತಿದಿನವೂ ಹೇಗೆ ಪೂಜಿಸಬೇಕೆಂಬ ವಿವರಣವಿದೆ. ಸ್ನಾನ, ಅರ್ಚನೆ, ನೈವೇದ್ಯಾದಿಗಳ ವಿಧಿ ವಿಧಾನಗಳಿವೆ. ಅಗ್ನಿಕುಂಡ, ಸಮಿತ್ತು ಮೊದಲಾದವುಗಳ ಲಕ್ಷಣಗಳು. ವೈದಿಕಾಗ್ನಿಗಿಂತ ಶೈವಾಗ್ನಿ ಶ್ರೇಷ್ಠ. ಅದೀಕ್ಷಿತನು ಶೈವಾಗ್ನಿಯನ್ನು ಉಪಯೋಗಿಸಬಾರದು. ಪಾರಮೇಶ್ವರಾಗಮ ೩, ೪, ೫ನೆಯ ಪಟಲಗಳಲ್ಲಿ ವೀರಶೈವರು ಕರ್ಮಾಂಗವಾಗಿ ಹವನಾದಿಗಳನ್ನು ಮಾಡಿ ಶಿವದೀಕ್ಷೆ ಮಾಡಬೇಕೆಂದು ಹೇಳಿದೆ. ಅಲ್ಲಿ ಗೋತ್ರ, ವರ್ಣಾಶ್ರಮ ಮತ್ತು ಷೋಡಶ ಸಂಸ್ಕಾರಗಳ ವಿವರಣವುಂಟು. ಆದರೆ ಇಲ್ಲಿ ಹಿಂಸಾತ್ಮಕ ಯಾಗಗಳು ನಿಷಿದ್ಧ.

**ಯೋಗಪಾದ**—ಪಾತಂಜಲ ಯೋಗಶಾಸ್ತ್ರಕ್ಕೆ ಆಗಮಗಳೇ ಮೂಲವೆಂದು ಪಂಡಿತರು ಅಭಿಪ್ರಾಯಪಡುತ್ತಾರೆ. ಈಶಾನಶಿವಗುರು ಮತ್ತು ನಿಜಗುಣರು ಆಗಮೋಕ್ತವಾದ ಯೋಗ ಪದ್ಧತಿಯನ್ನು ಅನುಸರಿಸಿ ಅಷ್ಟಾಂಗ ಯೋಗ ಸಾಧನೆಯನ್ನು ನಿರೂಪಿಸಿದ್ದಾರೆ.

**ಜ್ಞಾನಪಾದ**—ವೈಷ್ಣವಾಗಮಗಳಿಗಿಂತ ಶೈವಾಗಮಗಳಲ್ಲಿ ಜ್ಞಾನಪಾದಕ್ಕೆ ಹೆಚ್ಚಿನ ಮಹತ್ವವಿದೆ. ಈ ಪಾದದಲ್ಲಿ ಉಕ್ತವಾಗಿರುವ **ಪತಿ, ಪಶು, ಪಾಶ** ಎಂಬ ಮೂರು ಪದಾರ್ಥಗಳ ವಿಚಾರವನ್ನು ಕುರಿತು **ರೇಣುಕಾಚಾರ್ಯರು, ಶ್ರೀಕಂಠ, ನೀಲಕಂಠ, ಶ್ರೀಪತಿ ಪಂಡಿತಾರಾಧ್ಯ** ಮುಂತಾದ ಆಚಾರ್ಯರು **ಶಿವಾದ್ವೈತ, ವಿಶೇಷಾದ್ವೈತ** ಹಾಗೂ **ಶಕ್ತಿ ವಿಶಿಷ್ಟಾದ್ವೈತ** ಸಿದ್ಧಾಂತಗಳನ್ನು ಸ್ಥಾಪಿಸಿದ್ದಾರೆ.

## ವೀರಶೈವಾಗಮ

ವೀರಶೈವವು ಸಿದ್ಧಾಂತಾಗಮವೆಂದು ಪ್ರಸಿದ್ಧವಾದ ೨೮ ಶಿವಾಗಮಗಳ ಉತ್ತರ ಭಾಗದಲ್ಲಿ ಉಕ್ತವಾಗಿದೆಯೆಂದು ಹಿಂದೆಯೇ ಹೇಳಲಾಗಿದೆ. ಆದರೆ ವೀರಶೈವ ಸಂಪ್ರದಾಯದ ವಿಧಿ ವಿಧಾನಗಳನ್ನೊಳಗೊಂಡ ಆಗಮ ವಿಭಾಗಕ್ಕೆ "**ವೀರಮಾಹೇಶ್ವರತಂತ್ರ**" ಅಥವಾ "**ವೀರಶೈವಾಗಮ**" ಮುಂತಾದ ಹೆಸರುಗಳು ಬಂದಿವೆ. ವೀರಣಾಚಾರ್ಯ ವಿರಚಿತ "**ದಶಗ್ರಂಥಿ ಶಿವಜ್ಞಾನ ಪ್ರದೀಪಿಕೆ**"ಯಲ್ಲಿ

"ವೀರಮಾಹೇಶ್ವರಂ ತಂತ್ರಂ ಜ್ಞಾತವ್ಯಂ ತ್ರಿವಿಧಂ ಸುತ"

(ಆಹ್ನಿಕ ೬)

ಎಂಹು ಹೇಳಿರುವ "ವೀರಮಾಹೇಶ್ವರ ತಂತ್ರವು" ವೀರಶೈವಾಗಮುವೇ ಆಗಿದೆ. ನೀಲಕಂಠ ಶಿವಾಚಾರ್ಯರು ಕ್ರಿಯಾಸಾರಸಲ್ಲಿ

"ವೀರಶೈವಾಗಮಾಖ್ಯಾತ ಪದಾರ್ಥಾನಾಂ ಪರಸ್ಪರಂ"

(—ಉಪ. ೧ ಶ್ಲೋ. ೪೭೯)

ಎಂದೂ "ವೀರಶೈವಾಗಮದ ಕೋಂಟ" (ಜ. ಪುರಾಣ) "ವೀರ ಶಿವಾಗಮೋಕ್ತ ಚಿಹ್ನಾಂಕಿತರಾದವರ್ಗೆ" (ಶತಕತ್ರಯ) ಎಂದೂ "ವೀರಶೈವಾಗಮು" ಎಂಬ ಪದಗಳನ್ನೇ ಬಳಸಿದ್ದಾರೆ. ಮಹಾಕವಿ ಚಾಮರಸನು (ಕ್ರಿ. ಶ. ೧೪೩೦) ತನ್ನ ಪ್ರಭುಲಿಂಗಲೀಲೆಯಲ್ಲಿ ಅಕ್ಕಮಹಾದೇವಿಯ ತಂದೆ ನಿರ್ಮಳನನ್ನು "ವೀರ ಶೈವಾಗಮಿಕ" (ಗತಿ ೯. ಪ. ೨) ಎಂದು ಕರೆದಿದ್ದಾನೆ. ಈ ಕಾರಣಗಳಿಂದ "ವೀರಮಾಹೇಶ್ವರ ತಂತ್ರ", "ವೀರಶೈವಾಗಮ" "ವೀರಶೈವಾಗಮಿಕ" ಮುಂತಾದ ಪದಗಳು ಅನೇಕ ಶತಮಾನಗಳಿಂದ ವೀರಶೈವ ಧರ್ಮಗ್ರಂಥಗಳಲ್ಲಿ ಬಳಕೆಯಲ್ಲಿವೆ.

"ವೀರಶೈವ ಶಬ್ದಾರ್ಥ"

ಶಿವಜ್ಞಾನ ಪ್ರದೀಪಿಕೆಯಲ್ಲಿ "ವೀರಶೈವ" ಪದ ನಿರ್ವಚನವು ಹೀಗಿದೆ.

ಏಕ ಏವಾಯಮೇತಸ್ಮಿನ್ ಸರ್ವಸ್ಮಿನ್ ಜಗತೀತಿ ಯಃ ।
ವಿಶಿಷ್ಟ ಈರ್ಯತೇ ಯಸ್ಮಾತ್ ವೀರಇತ್ಯಭಿಧೀಯತೇ ॥ (ಅ. ೬)

ಜಗತ್ತಿನ ಯಾವ ಭಾಗದಲ್ಲಿಯೇ ಆಗಲಿ ವಿಶಿಷ್ಟವಾದ ಗುಣಗಳುಳ್ಳವನಿಗೆ "ವೀರ" ಎಂಬ ಅಭಿಧಾನವಿದೆ.

ಶಿವೇನ ಸಹ ಸಂಬಂಧಾತ್ ಶೈವಮಿತ್ಯಾದೃತಂ ಬುಧೈಃ ।
ಉಭಯೋಸ್ಸಂಪುಟೀ ಭಾವಾತ್ ವೀರಶೈವಮಿತಿ ಸ್ಮೃತಂ ॥

ಜೀವನವನ್ನು ಶಿವನಿಗಾಗಿ ಸಮರ್ಪಿಸುವುದರಿಂದಲೂ, ವೀರಾಗಮದಲ್ಲಿ ಉದಯವಾಗಿರುವುದರಿಂದಲೂ ವೀರ ಮತ್ತು ಶೈವ ಎಂಬ ಶಬ್ದದ್ವಯದ ಸಂಯೋಗದಿಂದ "ವೀರಶೈವ" ಎಂಬ ಪದವಾಗಿದೆ. ಎಂದರೆ ವೀರಶೈವವು ಇಪ್ಪತ್ತೆಂಟು ಆಗಮುಗಳಲ್ಲೊಂದಾದ ವೀರಾಗಮುಕ್ಕೆ ಹೆಚ್ಚು ಸಂಬಂಧಿಸಿರುತ್ತದೆ. ಆದುದರಿಂದ "ವೀರಾಗಮು"ವನ್ನೇ "ವೀರಶೈವಾಗಮು" ಎಂದು ಧಾರಾಳವಾಗಿ ಹೇಳಬಹುದು. ನೀಲಕಂಠ ಶಿವಾಚಾರ್ಯರು

ವೀರಲಿಂಗಂ ಸಮಭ್ಯರ್ಚ್ಯ ತತ್ಸ್ವರೂಪಂ ಪ್ರಯಾಂತಿ ಯೇ ।
ತೇ ವೀರಶೈವಾ ಲೋಕಾನಾಂ ನಿತ್ಯಂ ಕ್ಷೇಮಾಭಿಲಾಷಿಣಃ ॥

(ಕ್ರಿಯಾಸಾರ ಉ. ೧ ಶ್ಲೋ. ೧೫೧)

ಮೇಲೆ ಹೇಳಿದ ವೀರಾಗಮ ಪ್ರತಿಪನ್ನವಾದ ವೀರಲಿಂಗವನ್ನು ಪೂಜಿಸಿ ಅದೇ ಶಿವಲಿಂಗಸ್ವರೂಪವನ್ನು ತಳೆದು ಜಗತ್ತಿನ ಕ್ಷೇಮ ಚಿಂತನದಲ್ಲಿ ತೊಡಗಿರುವವರೇ ವೀರಶೈವರು" ಎಂದಿರುವ ಮಾತು "ಸಕಲ ಜೀವಾವಳಿಗೆ ಲೇಸನೇ ಬಯಸುವರು ಕೂಡಲ ಸಂಗನ ಶರಣರು" ಎಂದಿರುವ ಬಸವಣ್ಣನವರ ಉಕ್ತಿಯನ್ನೇ ಪ್ರತಿಬಿಂಬಿಸುತ್ತದೆ. ಇದಲ್ಲದೆ ಜಗದ್ಗುರು ರೇಣುಕಾಚಾರ್ಯರು ಹೇಳುವ "ಶಿವಜೀವೈಕ್ಯಬೋಧಕವಾದ ವಿದ್ಯೆಯಲ್ಲಿ ರತರಾಗಿರುವವರೇ ವೀರಶೈವರು" ಎಂಬ ಮಾತು ಮುಮುಕ್ಷುಗಳಾದವರಿಗೆ ಹೆಚ್ಚಾಗಿ ಅನ್ವಯಿಸುತ್ತದೆ. ಪಾರಮೇಶ್ವರಾಗಮದಲ್ಲಿ ವೀರ ಶಬ್ದಾರ್ಥವನ್ನು ಬಹು ಸುಂದರವಾಗಿ ನಿರ್ವಚನ ಮಾಡಲಾಗಿದೆ.

ವೀರತ್ವಂ ನಾಮ ದೇವೇಶಿ ಯಥಾ ವೀರೋ ರಣೇ ಭಟಃ ।
ತಥಾ ಮತೇ ಚ ಸದ್ಭಕ್ತ್ಯಾ ವೀರೋ ವೈರಾಗ್ಯತೋ ಭವೇತ್ ॥

ಹೇಗೆ ವೀರನು ರಣರಂಗದಲ್ಲಿ ಸ್ವಾಮಿಭಕ್ತಿಯಿಂದ ಜಯಾಕಾಂಕ್ಷಿಯಾಗಿ ಕಾದಿ ವೀರನೆನಿಸುವನೋ ಅದರಂತೆ ಮತ ಧರ್ಮಾನುಷ್ಠಾನಪರನಾದವನು ಸದ್ಭಕ್ತಿ ಮತ್ತು ವೈರಾಗ್ಯಗಳಲ್ಲಿ ವೀರನೆನಿಸುವುದೇ "ವೀರ" ಶಬ್ದದ ಅರ್ಥ. "ವೀರಶೈವನು ಈಷಣತ್ರಯರಹಿತನಾಗಿ ದೃಢವೈರಾಗ್ಯಸಂಪನ್ನನಾಗಿರಬೇಕಲ್ಲದೆ ಅವನು ಯುವಕನಾದರೂ ಪರಸ್ತ್ರೀರೂಪದರ್ಶನದಲ್ಲಿ ಕುರುಡನಾಗಿಯೂ, ಬಹುಜ್ಞನಾದರೂ ಪರದೋಷಾನುವಾದದಲ್ಲಿ ಮೂಕನಾಗಿಯೂ ಪರಸ್ತ್ರೀಯರ ವಿಷಯದಲ್ಲಿ ಷಂಡನಾಗಿಯೂ, ಪರಪೀಡನದಲ್ಲಿ ಕುಂಟನಾಗಿಯೂ, ಅಭಕ್ಷ್ಯ ಭಕ್ಷಣಾದಿಗಳಲ್ಲಿ ನಾಲಗೆಯಿಲ್ಲದವನಾಗಿಯೂ ಗರ್ವ, ದಂಭ, ಹಿಂಸೆಗಳನ್ನು ತ್ಯಜಿಸಿ ಗುರುಜಂಗಮ ಸೇವಾನಿರತನಾಗಿಯೂ, ಸರ್ವತ್ರ ಸಮಬುದ್ಧಿ, ಗೃಹಸ್ಥಧರ್ಮದಲ್ಲಿ ಸ್ಥೈರ್ಯ, ಸತ್ಯಸಂಧತೆ, ಅಸ್ತೇಯಧನತತ್ಪರತೆ, ಅಪರಿಗ್ರಹವುಳ್ಳವನಾಗಿ ತನಗಿಂತ ಅಧಿಕರಾದವರನ್ನು ದ್ವೇಷಿಸದೆ, ತನಗೆ ಸಮಾನನಾದವನಲ್ಲಿ ಅಸೂಯೆ ಪಡದೆ, ತನಗಿಂತ ಕಿರಿಯರನ್ನು ತಿರಸ್ಕ

ರಿಸದೆ ಶಾಂತಚಿತ್ತನಾಗಿರುವವನೇ ವೀರಶೈವನು."

ವೀತರಾಗಾದಿದೋಷತ್ವಾತ್ ಆತ್ಮತತ್ತ್ವವಿಚಾರಣಾತ್ ।
ವಿಕಲ್ಪಾನಲ್ಪಶೂನ್ಯತ್ವಾತ್ ವೀರಶೈವಮಿತಿಸ್ಮೃತಂ ॥
(—ಪಾರ. ಪ. ೮ ಶ್ಲೋ ೭–೨೨)

## ಶೈವ ಪ್ರಭೇದಗಳು

ಶೈವ ಪ್ರಭೇದಗಳು ಏಳು ಬಗೆ. ಅವು ಕ್ರಮವಾಗಿ **ಅನಾದಿಶೈವ, ಆದಿಶೈವ, ಮಹಾಶೈವ, ಅನುಶೈವ, ಅವಾಂತರಶೈವ, ಅನ್ಯಶೈವ** ಮತ್ತು **ವೀರಶೈವ** ಎಂದು. (ಸೂಕ್ಷ್ಮಾಗಮ ಪ. ೭–೪–೧೮) ಪಾರಮೇಶ್ವರದಲ್ಲಿ ಹೇಳಿರುವ "**ಯೋಗಶೈವ**" ಮತ್ತು "**ಜ್ಞಾನಶೈವ**" ಎಂಬ ಎರಡು ಪ್ರಭೇದ ಗಳೂ ಇವುಗಳಲ್ಲಿಯೇ ಅಂತರ್ಭಾವವಾಗಿವೆ. (ಪಾರ. ೧, ಪ. ೨೨–೨೫) ನಿಜ ಗುಣ ಶಿವಯೋಗಿಗಳ "**ವಿವೇಕ ಚಿಂತಾಮಣಿ**"ಯಲ್ಲಿಯೂ, "**ವೀರಶೈವ ಸದಾಚಾರ ಸಂಗ್ರಹ**" ಮುಂತಾದ ಗ್ರಂಥಗಳಲ್ಲಿಯೂ ಈ ಏಳು ವಿಧವಾದ ಶೈವಗಳ ಸ್ವರೂಪಗಳನ್ನು ವಿಸ್ತಾರವಾಗಿ ಬಣ್ಣಿಸಲಾಗಿದೆ.

## ಸಪ್ತವಿಧ ಶೈವಗಳ ಸಂಕ್ಷಿಪ್ತಸ್ವರೂಪ

**ಅನಾದಿಶೈವನು** ಸಾಕ್ಷಾತ್ ಪರಶಿವನೇ. **ಆದಿಶೈವರೆಂದರೆ**—

ಕೌಶಿಕಃ ಕಾಶ್ಯಪಶ್ಚೈವ ಭರದ್ವಾಜೋಽತ್ರಿರೇವ ಚ ।
ಗೌತಮಶ್ಚೇತಿ ಸಂಚೈತೇ ಪಂಚವಕ್ತ್ರೇಷು ದೀಕ್ಷಿತಾಃ ॥
(ಶಿ. ಪ್ರ. ಆ. ೬)

ಕೌಶಿಕ, ಕಾಶ್ಯಪ, ಭರದ್ವಾಜ, ಅತ್ರಿ ಮತ್ತು ಗೌತಮರು ಐದು ಮಂದಿ ಶಿವನ ಪಂಚಮುಖಗಳಲ್ಲಿ ದೀಕ್ಷಿತರಾದವರು. ಈ ಋಷಿಗಳ ವಂಶ ಗಳಲ್ಲಿ ಹುಟ್ಟಿದವರೇ ಶಿವದ್ವಿಜರು. ಇವರು ವೇದಾಗಮ ಪ್ರವೀಣರಾಗಿ ಕರ್ಷ ಣಾದಿ ಪ್ರತಿಷ್ಠಾಂತವಾದ ಆಗಮಿಕ ಕರ್ಮಗಳಿಗೆ ಅಧಿಕಾರಿಗಳು. ಇನ್ನು ಲೋಕಪೂಜ್ಯರಾದ ಮಹಾಂತರೇ **ಮಹಾಶೈವರು**. ದೀಕ್ಷಿತರಾದ ಕ್ಷತ್ರಿಯರು **ಅನುಶೈವರು**, ವೈಶ್ಯರು **ಅವಾಂತಶೈವರೆಂದು** ಹೇಳಲ್ಪಡುವರು. ಉಳಿ

ದವರು ಅನ್ಯಶೈವರು. ಹಿಂದೆ ಹೇಳಿದ ಯೋಗ ಮತ್ತು ಜ್ಞಾನ ಶೈವಗಳ ಸಮನ್ವಯ ಸಿದ್ಧಾಂತಾನುಷ್ಠಾನ ಮಾಡುವವರೇ ವೀರಶೈವರು.

## ತಾಂತ್ರಿಕವೈದಿಕರು

ವೇದಾಗಮಾನುಯಾಯಿಗಳನ್ನು ದಾರ್ಶನಿಕರು ಹೀಗೆ ವಿಂಗಡಿಸಿದ್ದಾರೆ. **ವೈದಿಕರು, ತಾಂತ್ರಿಕರು, ವೈದಿಕತಾಂತ್ರಿಕರು** ಮತ್ತು **ತಾಂತ್ರಿಕವೈದಿಕರು** ಎಂದು. ಇವರಲ್ಲಿ ಕೇವಲ ವೇದೋಕ್ತ ಕರ್ಮಾನುಷ್ಠಾನ ಮಾಡುವವರು ವೈದಿಕರು. ಕೇವಲ ಆಗಮೋ(ತಂತ್ರ)ಕ್ತ ಧರ್ಮಾನುಯಾಯಿಗಳು ತಾಂತ್ರಿಕರು. ವೇದವನ್ನು ಪ್ರಧಾನವಾಗಿಯೂ ಆಗಮವನ್ನು ಗೌಣವಾಗಿಯೂ ಸ್ವೀಕರಿಸುವವರು ವೈದಿಕತಾಂತ್ರಿಕರು. ತಂತ್ರ (ಆಗಮ) ವನ್ನು ಪ್ರಧಾನವಾಗಿಯೂ, ತಂತ್ರಾವಿರುದ್ಧ ವೇದಭಾಗಗಳನ್ನು ಪ್ರಮಾಣವಾಗಿ ಸ್ವೀಕರಿಸುವವರು ತಾಂತ್ರಿಕವೈದಿಕರು. ಇವರಲ್ಲಿ ವೀರಶೈವರು "**ತಾಂತ್ರಿಕವೈದಿಕ**"ರೆನಿಸಿದ್ದಾರೆ. ವೀರಶೈವರಿಗೆ ಆಗಮಗಳು ಪರಮ ಪ್ರಮಾಣ. ಇವರು ವೇದಗಳಲ್ಲಿ ಬರುವ ರುದ್ರಾಧ್ಯಾಯಾದಿಗಳನ್ನು ಹೆಚ್ಚಾಗಿ ಮನ್ನಿಸುವರಲ್ಲದೆ ಪಶುವಿಶಸನ ರೂಪವಾದ ಯಜ್ಞಭಾಗಗಳನ್ನು ಮಾನಿಸುವುದಿಲ್ಲ. ವೇದದ ಕೆಲವು ಭಾಗಗಳನ್ನು ಮಾತ್ರ ಒಪ್ಪಿದಲ್ಲಿ ವೈದಿಕೈಕದೇಶಿಗಳಾಗುವುದಿಲ್ಲವೆ ಎಂಬ ಸಂದೇಹವನ್ನು ಮಾಡಿಕೊಂಡು ನೀಲಕಂಠ ಶಿವಾಚಾರ್ಯರು

ಯಾವತಾಂ ಕರ್ಮಣಾಂ ಕೇನಾಪ್ಯನುಷ್ಠಾನಂ ನ ಶಕ್ಯತೇ ।
ಅತೋ ಯತ್ಕಿಂಚಿದೇವಾತ್ರ ವಿವಕ್ಷಿತಮುದೀರ್ಯತೇ ॥

(—ಕ್ರಿಯಾಸಾರ ಉ. ೧–೬೮)

ಎಂದರೆ "ವೇದೋಕ್ತವಾದ ಎಲ್ಲ ಕರ್ಮಗಳನ್ನು ಯಾರೂ ಅನುಷ್ಠಾನ ಮಾಡಲಾಗುವುದಿಲ್ಲ. ಅದು ಸಪ್ತಸಾಗರ ಶೋಷಣದಂತೆ ಅಶಕ್ಯ. ಅದಕ್ಕಾಗಿ ವೀರಶೈವವು ಪಶುಕರ್ಮಗಳನ್ನು ಬದಿಗಿಟ್ಟು ವೇದೋಕ್ತವಾದ ಧ್ಯಾನ ಧಾರಣ ಪೂಜಾ ಧ್ಯಾನಾನುಷ್ಠಾನರೂಪವಾದ ಪತಿಕರ್ಮಗಳನ್ನು ಮಾತ್ರ ಸ್ವೀಕರಿಸಿದೆ" ಎಂದು ಉತ್ತರಿಸಿದ್ದಾರೆ.

## ವೀರಶೈವ ಪ್ರಭೇದಗಳು

ಆಗಮಗಳಲ್ಲಿ ವೀರಶೈವರನ್ನು **ಸಾಮಾನ್ಯ, ವಿಶೇಷ** ಮತ್ತು **ನಿರಾ**

ಭಾರಿ ಎಂದು ವಿಭಾಗಿಸಲಾಗಿದೆ. ಅಂದರೆ ಜ್ಞಾನವಿಕಾಸಮಾರ್ಗದಲ್ಲಿ ಇವರನ್ನು ಕ್ರಮವಾಗಿ ಪ್ರಾಥಮಿಕ, ಪ್ರೌಢ ಮತ್ತು ಸಿದ್ಧರೆಂದು ಕರೆಯಬಹುದು.

ಗುರುವಿನಿಂದ ಕೊಡಲ್ಪಟ್ಟ ಲಿಂಗದಲ್ಲಿ ನಿಷ್ಠೆಯಿಟ್ಟು ಗುರು-ಲಿಂಗ-ಜಂಗಮ ಸೇವಾತತ್ಪರರಾಗಿರುವವರು ಸಾಮಾನ್ಯ ವೀರಶೈವರು.

ತಸ್ಮಾತ್ ಯತ್ನೇನ ಮದ್ಭಕ್ತೈಃ ವೀರಮಾಹೇಶ್ವರಾತ್ಮನಾಂ ।
ಸೇವಾ ಕಾರ್ಯಾ ಮಹಾದೇವಿ ಮನೋವಾಕ್ಕಾಯ ಕರ್ಮಭಿಃ ॥

(ಸೂಕ್ಷ್ಮ ೭–೪೦)

ಶಿವಾಗಮೋಕ್ತವಾದ ಜ್ಞಾನ ಮತ್ತು ಕರ್ಮಗಳ ಅನುಷ್ಠಾನದಿಂದ ಪರಿಪಕ್ವಾಂತಃಕರಣನಾಗಿ ಅಂಗ-ಲಿಂಗಗಳ ಅಂತರವನ್ನು ಚೆನ್ನಾಗಿ ಅರಿತು ಪಿಂಡಾದಿಜ್ಞಾನಶೂನ್ಯಾಂತವಾದ ನೂರೊಂದು ಸ್ಥಲಗಳ ರಹಸ್ಯವನ್ನರಿತು ಪರೋಪಕಾರಕ್ಕಾಗಿ ಆಗಮೋಕ್ತ ಕರ್ಮಾನುಷ್ಠಾನಪರನಾಗಿರುವವನು ವಿಶೇಷ ವೀರಶೈವನು

"ವಿಶಿಷ್ಟಧರ್ಮಾನುಷ್ಠಾನಾತ್ ವಿಶೇಷ ಇತಿಕಥ್ಯತೆ"

(ಸೂಕ್ಷ್ಮ ೭–೪೫)

ವಿಶೇಷ ವೀರಶೈವನೆನಿಸಿದ 'ವೀರಮಾಹೇಶ್ವರ'ನೇ ಅತ್ಯಂತ ಪರಿಪಕ್ವಚಿತ್ತನಾಗಿ ಮುಂದೆ ನಿರಾಭಾರಿಯೆನಿಸುವನು. ಆತನ ಲಕ್ಷಣವು ಹೀಗಿದೆ.

ಸರ್ವಸಂಸಾರ ಸೌಖ್ಯಾನಿ ತ್ಯಕ್ತ್ವಾ ಚಿತ್ತಂ ಶಿವೇ ಲಯೇತ್ ।
ದಂಡಕೌಪೀನ ಕಾಷಾಯ ಜಟಾವಲ್ಕಲಧಾರಕಃ ॥
ಮುಂಡೀ ವಾ ಶಿವ ಚಿಹ್ನಾನಿ ಧಾರಯೇದಜಿನಾದಿಕಮ್ ।
ಭಿಕ್ಷಾಶೀ ನಿಯತಾಹಾರಃ ಸುಖಸ್ಸಂಸಾರವರ್ಜಿತಃ ॥
ನಿರಾಭಾರೀ ತು ವಿಜ್ಞೇಯಃ ಸ ಏವ ಪರಶ್ಶಿವಃ ॥

—ಶಿವಜ್ಞಾನ ಪ್ರದೀಪಿಕಾ ಅ. ೭

ಸರ್ವಸಂಗ ಪರಿತ್ಯಾಗಮಾಡಿ ಮನಸ್ಸನ್ನು ಶಿವನಲ್ಲಿ ಐಕ್ಯಗೊಳಿಸಿ ದಂಡ, ಕೌಪೀನ, ಕಾಷಾಯ, ಜಟಾವಲ್ಕಲಗಳನ್ನು ಧರಿಸಿ ಮುಂಡನ ಇಲ್ಲವೆ ಶಿಖಿಯಾದರೂ ಆಗಬಹುದು. ಮೇಲೆ ಹೇಳಿದ ಶಿವಚಿಹ್ನೆಗಳನ್ನು ಧರಿಸಿ ಭಿಕ್ಷಾಶಿಯೂ ನಿಯತಾಹಾರಿಯೂ ಆಗಿರುವವನು **"ನಿರಾಭಾರಿ."**

## ಶುದ್ಧಶೈವ ಮತ್ತು ವೀರಶೈವಗಳಿಗಿರುವ ಅಂತರ

ಶುದ್ಧ ಶೈವನು ವಿಶೇಷತಃ ಮಂತ್ರ ತಂತ್ರಾನುಷ್ಠಾನದಿಂದ ಶುದ್ಧನಾಗುತ್ತಾನೆ. ಲೋಪವಾದರೆ ಪ್ರಾಯಶ್ಚಿತ್ತ ಮಾಡಿಕೊಂಡು ಶುದ್ಧನಾಗುವನು. ಆತನ ಇಷ್ಟಲಿಂಗವು ಯಾವ ಕಾರಣದಿಂದಲಾದರೂ ನಷ್ಟವಾದರೆ ಒಂದು ಲಕ್ಷ ಅಘೋರಮಂತ್ರವನ್ನು ಜಪಿಸಿ ಬೇರೆ ಲಿಂಗವನ್ನು ಪ್ರತಿಷ್ಠಿಸಬೇಕು. ವ್ರತ ಮತ್ತು ಕ್ರಿಯೆಗಳಲ್ಲಿ ಲೋಪವುಂಟಾದರೆ ಗಾಯತ್ರಿಯನ್ನು ಉಕ್ತ ಸಂಖ್ಯೆಯಲ್ಲಿ ಜಪಿಸಿ ಶುದ್ಧಿ ಹೊಂದುವನು. (ಶಿ. ಪ್ರ. ಅ. ೬)

ವೀರಶೈವರಿಗೆ ಪ್ರಾಣಲಿಂಗಧಾರಣವು ಒಂದು ವ್ರತವೆನಿಸುತ್ತದೆ. ಅದು ಯಾವ ಜೀವವೂ ಅನುಷ್ಠಿಸುವ ಮಹಾವ್ರತ. ಅವರು 'ಪ್ರಾಣವೇ ಲಿಂಗ, ಲಿಂಗವೇ ಪ್ರಾಣ' ಎಂಬ ಸ್ಥಿತಿಯಲ್ಲಿರುತ್ತಾರೆ. ಹಸ್ತಾದಿಗಳಲ್ಲಿ ಧರಿಸಿರುವ ಅಂಥ ಪ್ರಾಣಲಿಂಗವು ಕಳೆದುಹೋದರೆ ಅದಕ್ಕೆ ಪ್ರಾಯಶ್ಚಿತ್ತವೇ ಇಲ್ಲ. ಏಕೆಂದರೆ ಪ್ರಾಣಲಿಂಗದ ಜೊತೆಗೆ ಪ್ರಾಣವೂ ನಿರ್ಗಮವಾಗುವುದೆಂಬುದೇ ಈ ಮಾತಿನ ಮಾರ್ಮಿಕ ಅರ್ಥ. (ಶಿವಜ್ಞಾನ ಪ್ರದೀಪಿಕಾ ಅ. ೬) ಆದರೆ ಶಿವಶರಣರು ಮಾತ್ರ ಈ ವಿಷಯದಲ್ಲಿ ಭಿನ್ನಾಭಿಪ್ರಾಯವುಳ್ಳವರು. ಏಕೆಂದರೆ "ಪ್ರಾಣಲಿಂಗವನ್ನು ಪ್ರದಾನಮಾಡಿದ ಗುರು ಈಗಲೂ ಪ್ರಾಣಲಿಂಗವನ್ನು ಪ್ರದಾನಮಾಡಬಲ್ಲವನಾದ್ದರಿಂದ ಪ್ರಾಣಲಿಂಗವು ಕಳೆವುದೆಂದರೇನು ? ಆದ್ದರಿಂದ ಪ್ರಾಣತ್ಯಾಗ ಮಾಡಬೇಕಾದ ಪ್ರಮೇಯವಿಲ್ಲ" ಎನ್ನುತ್ತಾರೆ.

ಇಂಥ ಪ್ರಾಣಲಿಂಗಿಯ ಲಿಂಗಪೂಜಾನುಷ್ಠಾನಗಳಿಗೆ ಜನನಾದಿ ಪಂಚ ಸೂತಕಗಳ ಹಂಗಿಲ್ಲ.

### ಪ್ರಾಯಶ್ಚಿತ್ತ

ವೀರಶೈವಕ್ರಮಂ ಪ್ರೋಕ್ತಂ ಪ್ರಾಯಶ್ಚಿತ್ತವಿವರ್ಜಿತಂ ।
ಶುದ್ಧ ಶೈವೋ ವಿಶೇಷೇಣ ಮಂತ್ರತಂತ್ರ ಪ್ರಚಾರಣಾತ್ ॥

ಶುದ್ಧೋ ಭವತಿ ಲೋಕೇಷು ಪ್ರಾಯಶ್ಚಿತ್ತವಿಧಾನತಃ ।
ಪ್ರಾಣಲಿಂಗವ್ರತೇ ಲುಪ್ತೇ ಪ್ರಾಯಶ್ಚಿತ್ತಂ ನ ವಿದ್ಯತೇ ।
ಪ್ರಾಣತ್ಯಾಗಾತ್ ಪರಂ ತಸ್ಮಾತ್ಸಾವಧಾನೇನ ಧಾರಯೇತ್ ॥

—ವಾತುಲೇ

## ಶುದ್ಧಶೈವ-ವೀರಶೈವ ಕ್ರಿಯಾಸಾಮ್ಯ

ಶಿವಕುಂಭಂ ಸಾಮಾಸಾಧ್ಯ ಸ್ಥಂಡಿಲಾದಿಷು ಪೂರ್ವವತ್ ।
ಶಿವಕುಂಭೇ ಶಿವಂ ಪೂಜ್ಯ ಭಕ್ತ್ಯಾನನ್ಯಾಂಶ್ಚ ತೋಷಯೇತ್ ॥

ಅತ್ರ ಪೂರ್ವದಿತಿ ಪೂರ್ವೋಕ್ತ ಶುದ್ಧ ಶೈವದೀಕ್ಷಾ ವಿಧಾನ ಪ್ರೋಕ್ತ ಪ್ರಕಾರೇಣೇತ್ಯರ್ಥಃ ॥

—ವೇದಾಂತಸಾರ ವೀರಶೈವ ಚಿಂತಾಮಣಿ ಉ. ಖಂ. ಪ್ರ. ೬ ಪು. ೧೪೧

## ಆವರಣಪೂಜಾ ವೀರಶೈವಾನಾಂ (ಶಿವರಹಸ್ಯೇ)

ವೀರಶೈವಾಭಿಷಿಕ್ತಾನಾಂ ಭಕ್ತಾನಾಮರ್ಹಣಾಸ್ಪದಂ ।
ಗರ್ಭಾವರಣಮೀಶಸ್ಯ ಸೂಚ್ಯತೇ ಸೂಕ್ಷ್ಮರೂಪತಃ ॥

ಪಂಚಬ್ರಹ್ಮ ಶಿವಾಂಗೈಶ್ಚ ಪೂಜಯೇತ್ಪೂರ್ವವತ್ತಥಾ ।
ಏಕಾವರಣಮೇವೋಕ್ತಂ ಪೂಜಯೇದ್ದೇಶಿಕಸ್ತಥಾ ॥

ಇತಿ ವಚನಾದ್ವೀರಶೈವಾನಾಂ ಪಂಚಬ್ರಹ್ಮಷಡಂಗಾತ್ಮಕ ಗರ್ಭಾವರಣಸಮೇತ ಶಿವಲಿಂಗಾರ್ಚನಂ ಕರ್ತವ್ಯಂ ತದಿತರಾವರಣಾರ್ಚನಂ ನ ಕರ್ತವ್ಯಮಿತ್ಯರ್ಥಃ ॥

—ವೇದಾಂತಸಾರ ವೀರಶೈವ ಚಿಂತಾಮಣಿ ಪು. ೧೪೦

## ಮೂರ್ತಿಪೂಜೆ ಮತ್ತು ಆಗಮಸಿದ್ಧಾಂತ

ಶಿವಾಗಮಗಳ ಪೂರ್ವಭಾಗಗಳೆನಿಸಿರುವ ಕ್ರಿಯಾಪಾದ ಮತ್ತು ಚರ್ಯಾಪಾದಗಳಲ್ಲಿ "ಕರ್ಷಣಾದಿ ಪ್ರತಿಷ್ಠಾಂತ ಮತ್ತು ಪ್ರತಿಷ್ಠಾದ್ಯುತ್ಸವಾಂತ" ಕ್ರಿಯಾಕಲಾಪಗಳೇ ಪ್ರಸ್ತಾಪಿಸಲ್ಪಟ್ಟಿವೆ. ಮತ್ತು

ಅರ್ಚಾರೂಪಸ್ಯ ಮೇ ಪೂಜಾ ಶಿವಜ್ಞಾನಸ್ಯ ಕಾರಣಂ ।
ಶಿವಜ್ಞಾನಸ್ತು ಸರ್ವೇಷಾಂ ಭಕ್ತಾನಾಂ ಮುಕ್ತಿಕಾರಣಂ ॥
ತಸ್ಮಾತ್ಸರ್ವ ಪ್ರಯತ್ನೇನ ಶಿವಂ ಶೈವೇನ ಪೂಜಯೇತ್ ॥

—ಕಪರ್ದಿಸಂಹಿತಾ ೩. ೨೬-೨೭

ಪರಮಾತ್ಮನ ಅರ್ಚಾರೂಪವಾದ ಮೂರ್ತಿಪೂಜೆಯು ಶಿವಜ್ಞಾನಕ್ಕೆ ಕಾರಣ. ಶಿವಜ್ಞಾನವು ಮುಕ್ತಿಗೆ ಕಾರಣ. ಆದ್ದರಿಂದ ಶೈವಾಗಮೋಕ್ತವಾಗಿ ಶಿವಾ

ರ್ಚನೆ ಮಾಡಬೇಕು ಎಂದು ವಿಧಿಸಿರುವುದಲ್ಲವೆ ಕಲಿಯುಗದಲ್ಲಿ

"ಆಗಮೋಕ್ತ ವಿಧಾನೇನ ಕಲೌ ದೇವಾನ್ಯಜೇತ್ಸುಧೀಃ"

ಎಂದು ಮುಂತಾಗಿ ವಿಧಿಸಿ ಆಗಮೋಕ್ತ ಪೂಜಾವಿಧಾನಕ್ಕೆ ಪ್ರಾಶಸ್ತ್ಯವನ್ನು ಹೇಳಲಾಗುತ್ತಿದೆ. ಆದರೆ ಸ್ವಾಮಿ ದಯಾನಂದ ಸರಸ್ವತಿಯವರು ಮೂರ್ತಿ ಪೂಜೆಯು ವೇದವಿರುದ್ಧಾಚಾರವೆಂದೂ ಅದು ಜೈನರ ಕಾಲದಿಂದ ಭಾರತೀಯರಲ್ಲಿ ಬಳಕೆಗೆ ಬಂದಿತೆಂದೂ ವಾದಿಸುತ್ತಿದ್ದಾರೆ.೧ ಈ ಬಗ್ಗೆ ಪರಿಶೀಲನೆ ಅಗತ್ಯ. ಸ್ವಾಮಿ ದಯಾನಂದರ ಕಾಲಕ್ಕೆ ಜಗತ್ಪ್ರಸಿದ್ಧವಾದ ಪ್ರಾಚ್ಯ ಸಂಶೋಧನೆಗಳಲ್ಲೊಂದಾದ ಸಿಂಧೂತೀರದ ಹರಪ್ಪ–ಮೊಹೆಂಜೋದಾರೋ ಕಣಿವೆಯ ಭೂಗರ್ಭ ಸಂಶೋಧನೆಯ ವರದಿಗಳು ಬಂದಿರಲಿಲ್ಲ. ಸರ್ ಜಾನ್ ಮಾರ್ಷಲ್ಲರೇ ಮುಂತಾದ ವಿದ್ವಾಂಸರು ಅಲ್ಲಿಯ ಅವಶೇಷಗಳು ವೇದಕಾಲಕ್ಕಿಂತಲೂ ಅತ್ಯಂತ ಪ್ರಾಚೀನವೆಂದು ನಿರ್ಧರಿಸಿದ್ದಾರೆ. ಈ ಭೂಸಂಶೋಧನೆಯಲ್ಲಿ ದೊರೆತಿರುವ ಅವಶೇಷಗಳಲ್ಲಿ ೧೦ ವಿಧವಾದ ಶಿವಲಿಂಗಗಳು ಮತ್ತು ಧ್ಯಾನಾರೂಢನಾಗಿ ಪದ್ಮಾಸನದಲ್ಲಿ ಕುಳಿತಿರುವ ಶಿವನ ಮೂರ್ತಿಯೂ ಸೇರಿದೆ ಎಂದು ಶ್ರೀ ವಿ. ಪಿ. ಕರ್ಮಕರ್ ಅವರು 'ರಿಲಿಜನ್ಸ್ ಆಫ್ ಇಂಡಿಯಾ' ಎಂಬ ಗ್ರಂಥದಲ್ಲಿ ಉಲ್ಲೇಖಿಸಿದ್ದಾರೆ.೨ ಅಲೆನ್ ಮತ್ತು ಅನ್‌ವಿನ್ ಎಂಬುವರೂ ಸಹ ಇದೇ ವಿಷಯವನ್ನು "Vedic Age" ಎಂಬ ಗ್ರಂಥದಲ್ಲಿ ಉಲ್ಲೇಖಿಸಿ "ಯೋಗೇಶ್ವರ" ಮತ್ತು "ದಕ್ಷಿಣಾಮೂರ್ತಿ" ಮುಂತಾದ ಕಲ್ಪನೆಗಳು ಸಿಂಧೂತೀರದ ನಾಗರಿಕತೆಯ ಕಾಲಕ್ಕೇ ಇದ್ದುದಾಗಿ ನಿರ್ಧರಿಸಿದ್ದಾರೆ. ಶೈವಮತದ ಪ್ರಾಚೀನತೆಯನ್ನು ಚರ್ಚಿಸಿರುವ ಶ್ರೀ ವಿ. ಆರ್. ರಾಮಚಂದ್ರ ದೀಕ್ಷಿತ್, ಎಂ.ಎ., (ಮದರಾಸ್ ವಿಶ್ವವಿದ್ಯಾನಿಲಯ) ಅವರು "ಕಲ್ಯಾಣ ಶಿವಾಂಕ"ಕ್ಕೆ ಬರೆದಿರುವ ಲೇಖನದಲ್ಲಿ ಈ ವಿಷಯವನ್ನು ವಿಸ್ತಾರವಾಗಿ ಚರ್ಚಿಸಿ "ಲಿಂಗಧಾರಣ ಮತ್ತು ಲಿಂಗಪೂಜಾ"ದಿಗಳು ಆರ್ಯ ಸಂಸ್ಕೃತಿಗಿಂತಲೂ ಬಹು ಪುರಾತನವೆಂದು ಸಮರ್ಥಿಸಿದ್ದಾರೆ.೩

---

೧ಸತ್ಯಾರ್ಥ ಪ್ರಕಾಶ ಸ. ೧೧ ಪು. ೩೨೭.

೨ವೀರಶೈವದ ಉಗಮ ಮತ್ತು ಪ್ರಗತಿ (ಪು. ೪೯–೫೦) ಶ್ರೀ ಟ. ಎನ್. ಮಲ್ಲಪ್ಪನವರು. (ಹೈಕೋರ್ಟ್ ಜಡ್ಜ್, ಬೆಂಗಳೂರು)

೩ಕಲ್ಯಾಣ ಶಿವಾಂಕ (ಪು. ೧೬೮) plate xiii in vol. I of Mohenjodaro and Indus Civilization, Edited by Sir John Marshall.

ಕೇವಲ ಭಾರತದಲ್ಲಿ ಮಾತ್ರವಲ್ಲದೆ ವಿದೇಶಗಳಲ್ಲಿಯೂ ಸಹ ಪುರಾತನ ಕಾಲದಲ್ಲಿಯೇ ನೂರಾರು ಶಿವಾಲಯಗಳು ವಿರಾಜಿಸುತ್ತಿದ್ದ ಬಗ್ಗೆ ವಿದ್ವಾಂಸರು ವಿವೇಚಿಸಿದ್ದಾರೆ. ಆಫ್ರಿಕಾ ಮೊದಲಾದ ಖಂಡಗಳಲ್ಲಿರುವ ಶಿವಾಲಯಗಳನ್ನು ಕುರಿತು ಫ್ರೆಂಚ್ ದೇಶದ **ಲುಯಿ** ಎಂಬ ಮಹಾಶಯರು ಬರೆದಿರುವ ಗ್ರಂಥವನ್ನು ಅಧಿಕರಿಸಿ ಕಾಶಿಯ ಮಿ|| ಬಾಬೂ ಬೇಜೂಸಿಂಹ ಅವರು ರಚಿಸಿರುವ **"ನಿರ್ಮಾಲ್ಯ ರತ್ನಾಕರ"** ಎಂಬ ಗ್ರಂಥದ ಪ್ರಸ್ತಾವನೆಯಲ್ಲಿ ಈ ಬಗ್ಗೆ ಹೀಗೆ ಉಲ್ಲೇಖಿಸಿದ್ದಾರೆ.

"ಉತ್ತರ ಆಫ್ರಿಕಾಖಂಡದ ಈಜಿಪ್ಟ್‌ನಲ್ಲಿರುವ **ಮೆಂಫಿಸ್**‌ನಲ್ಲಿ ನಂದಿವಾಹನ, ತ್ರಿಶೂಲ-ಸರ್ಪ-ವ್ಯಾಘ್ರ ಚರ್ಮಾಂಬರಧಾರಿ ಪರಶಿವನ ವಿಗ್ರಹವಿದೆ. ಅಲ್ಲಿ ಈ ವಿಗ್ರಹಕ್ಕೆ **ಅಸಿರಿಸ್** ಎಂಬ ಹೆಸರಿದೆ. ಟರ್ಕಿದೇಶದ **ಬಾಬಿಲೋನ್**‌ನಲ್ಲಿ ೧೨೦೦ ಘನಹಸ್ತ ಎತ್ತರದ ಶಿವಲಿಂಗವಿದೆ. ಹೆಡ್ರಾಪ್ರೋಲೀಸ್ ಪಟ್ಟಣದಲ್ಲಿ ೩೦೦ ಘನಹಸ್ತ ಎತ್ತರವಿರುವ ಶಿವಲಿಂಗವಿದೆ. ಮುಸಲ್ಮಾನರ ಪುಣ್ಯಕ್ಷೇತ್ರವೆನಿಸಿರುವ **ಮಕ್ಕಾ**ದಲ್ಲಿರುವ **ಮಕ್ಕೇಶ್ವರ**ಲಿಂಗವು ಜಗತ್ಪ್ರಸಿದ್ಧ." ಈ ಪುಣ್ಯಕ್ಷೇತ್ರಕ್ಕೆ ಶ್ರೀಶೈಲ ಪೀಠಾಧೀಶ್ವರರಾಗಿದ್ದ ಕರಿಬಸವ ದೇಶಿಕೇಂದ್ರ ಶಿವಾಚಾರ್ಯರು ಮತ್ತು ಮಳೆಯ ಮಲ್ಲೇಶ್ವರ ಎಂಬ ಶಿವಯೋಗಿಗಳು ಭೇಟಿಕೊಟ್ಟ ಬಗ್ಗೆ ಶ್ರೀಶೈಲ ಪಂಡಿತಾರಾಧ್ಯ ಚರಿತ್ರೆ ಮತ್ತು ಚನ್ನಬಸವ ಪುರಾಣಗಳಲ್ಲಿ ಉಲ್ಲೇಖಗಳಿವೆ. "ಇವುಗಲ್ಲದೆ ಅಮೆರಿಕಾಖಂಡಕ್ಕೆ ಸೇರಿದ **ಬ್ರೆಜಿಲ್**‌ನಲ್ಲಿರುವ ಶಿವಲಿಂಗ ಮತ್ತು ವಿಘ್ನೇಶ್ವರ. ಗ್ರೀಸ್ ದೇಶಕ್ಕೆ ಸೇರಿದ **ಕಾರಿಂಥ್**‌ನಲ್ಲಿ ಪಾರ್ವತಿವಿಗ್ರಹ, **ಸ್ಕಾಟ್‌ಲೆಂಡ್**‌ನ **ಗ್ಲಾಸ್ಗೋ** ಪಟ್ಟಣದಲ್ಲಿವ ಶಿವಲಿಂಗ, **ಫ್ರೀಜಿಯುನ್** ದೇಶದಲ್ಲಿನ **ಏಟಿಸ್ ಶಿವಲಿಂಗ, ನಿನಿವಾ** ಪಟ್ಟಣದಲ್ಲಿರುವ **ಏಷೀರ್** ಎಂಬ ಶಿವಲಿಂಗ, ಯಹೂದಿ ದೇಶದಲ್ಲಿ **ಅಫರೀದಿಸ್ಥಾನ್, ಚಿತ್ರಾಲ, ಕಾಬೂಲ್, ಬಲಖ್, ಬುಖಾರ** ಮುಂತಾದ ಕಡೆಗಳಲ್ಲಿಯೂಸಹ ಅನೇಕಶಿವಲಿಂಗಗಳು ದೊರೆತಿವೆ. ಅನ್ನಾಂ (Annam) ಚಂಪಾ ದೇಶದಲ್ಲಿನ ಶಿವಾಲಯಗಳು ಸುಪ್ರಸಿದ್ಧ. ಅಲ್ಲಿಯ **ಮಿ-ಸೋನ** ಗ್ರಾಮದಲ್ಲಿರುವ **ಭದ್ರೇಶ್ವರ** ದೇವರಿಗೆ ಕ್ರಿ. ಶ. ೫ನೇ ಶತಮಾನದಲ್ಲಿ ಅಲ್ಲಿನ ರಾಜನು ದಾನಮಾಡಿರುವ ಬಗ್ಗೆ ಅನೇಕ ಶಾಸನಗಳು ದೊರೆತಿವೆ. ಮಾತ್ರವಲ್ಲದೆ ಅಲ್ಲಿಯ ವಿಘ್ನೇಶ್ವರ ಮುಂತಾದ ದೇವತೆಗಳ ಹಸ್ತಗಳಲ್ಲಿ **ಶಿವಲಿಂಗವಿ**

ರುವುದು ಅತ್ಯಂತ ಪ್ರಮೋದಾಸ್ಪದವಾಗಿದೆ. ಈದೇವಾಲಯಗಳ ವಿಷಯವನ್ನು ಕುರಿತು ದೇವಾಲಯಗಳ ಚಿತ್ರಸಹಿತ Het oudejava en sijn cust (ಯವದ್ವೀಪ ಶಿಲ್ಪಕಲಾ) ಎಂಬ ದೊಡ್ಡ ಗ್ರಂಥವನ್ನು ಡಚ್ ಭಾಷೆಯಲ್ಲಿ ಬರೆದು ಪ್ರಕಟಿಸಿರುವ ಹಾಲೆಂಡ್ ದೇಶದ ಲೈಡನ್ ವಿಶ್ವವಿದ್ಯಾಲಯದ ಪ್ರೊ. ಎನ್. ಜೆ. ಕ್ರೋಮ್ ಅವರು ಅಭಿನಂದ್ಯರಾಗಿದ್ದಾರೆ.*

ಈ ಎಲ್ಲ ಕಾರಣಗಳಿಂದ ಮೂರ್ತಿಪೂಜೆಯು ಸುಮಾರು ೨,೫೦೦ ವರ್ಷಗಳಷ್ಟು ಹಿಂದಿನದೆನಿಸಿರುವ ಜೈನಸಂಸ್ಕೃತಿಯಿಂದ ಬಂದುದಲ್ಲ. ಮಾತ್ರವಲ್ಲದೆ ಅದು ವೇದ ಪೂರ್ವಯುಗಕ್ಕೆ ಸಂಬಂಧಿಸಿದುದೆಂದು ವ್ಯಕ್ತವಾಗುತ್ತದೆ.

ಎರಡನೆಯದಾಗಿ ಸ್ವಾಮಿ ದಯಾನಂದ ಸರಸ್ವತಿಯವರು ಪರಮಾತ್ಮನು ನಿರಾಕಾರನೂ ನಿರ್ಗುಣನೂ ಆಗಿರುವುದರಿಂದ ಆತನಿಗೆ ಆಕೃತಿಯನ್ನು ಕಲ್ಪಿಸುವುದು ಅನುಚಿತ ಮುಂತಾಗಿ ವಾದಿಸಿ ಮೂರ್ತಿಪೂಜೆ ಮತ್ತು ನಾಮಸ್ಮರಣಾದಿಗಳನ್ನು ನಿರಾಕರಿಸಿ

ನ ಕಾಷ್ಠೇ ವಿದ್ಯತೇ ದೇವೋ ನ ಪಾಷಾಣೇ ನ ಮೃಣ್ಮಯೇ ।
ಭಾವೇ ಹಿ ವಿದ್ಯತೇ ದೇವಃ ತಸ್ಮಾದ್ಭಾವೋ ಹಿ ಕಾರಣಮ್ ॥

ಎಂದು ಉದಾಹರಿಸಿ ಪರಮಾತ್ಮನು ಕಟ್ಟಿಗೆ, ಕಲ್ಲು, ಮಣ್ಣು ಮೊದಲಾದವುಗಳಿಂದ ಮಾಡಿದ ಪದಾರ್ಥಗಳಲ್ಲಿಲ್ಲ. ಆದರೆ ಆತನು ಭಾವನೆಯಲ್ಲಿರುತ್ತಾನೆ. ಎಲ್ಲಿ ಭಾವನೆಯಿರುವುದೋ ಅಲ್ಲಿ ಪರಮಾತ್ಮನಿರುತ್ತಾನೆ ಎಂದಿದ್ದಾರೆ.೧

ಮಹಾ ಪ್ರತಿಭಾಶಾಲಿಗಳಾದ ಶ್ರೀ ಸ್ವಾಮಿಜಿಯವರ ವಾದ ಕೌಶಲವು ಅನನುಕರಣೀಯವಾದರೂ ಆ ಬಗ್ಗೆ ವಿಮರ್ಶಿಸುವುದು ಅನವಸರವೇನಲ್ಲ. ಏಕೆಂದರೆ ಮೇಲಿನ ಶ್ಲೋಕದಲ್ಲಿಯೇ "ಭಾವವಿದ್ದಲ್ಲಿ ಪರಮಾತ್ಮನಿರುವನು" ಎಂದಿದೆ. ಅವರೇ ಹೇಳುವಂತೆ ಪರಮಾತ್ಮನು ಸರ್ವಾಂತರ್ಯಾಮಿ. ಅಂದಮೇಲೆ ಆತ ಕಾಷ್ಠ ಪಾಷಾಣ ಮೃಣ್ಮಯಾದಿಗಳಲ್ಲಿ ಏಕೆ ಇರುವುದಿಲ್ಲವೊ ತಿಳಿಯದು. ಮೇಲಾಗಿ ಪರಮಾತ್ಮನು ನಿರ್ಗುಣ, ನಿರಾಕಾರಾದಿ ವಿಶೇಷಣಗಳಿಂದ ಶ್ರುತಿಗಳಲ್ಲಿ ವರ್ಣಿತವಾಗಿರುವಂತೆ ಸಗುಣ, ಸಕಲ ಸಾಕಾರ ಎಂದೂ

---

*ವೀರಶೈವತತ್ವ (ಪಂ. ಕಾಶಿನಾಥ ಶಾಸ್ತ್ರಿಗಳು) ಪು. ೬ ಮತ್ತು ೧೭೨

೧ಸತ್ಯಾರ್ಥ ಪ್ರಕಾಶ (ಸಮು. ೧೧ ಪು. ೩೩೦)

**

ವರ್ಣಿಸಲ್ಪಟ್ಟಿರುವುದು ಕಂಡುಬರುತ್ತದೆ. ಅಲ್ಲದೆ ಪರಮಾತ್ಮನಲ್ಲಿ ಹೇಯವಾದ ಸತ್ವರಜಸ್ತಮೋಗುಣಗಳು ನಿಷೇಧಿಸಲ್ಪಟ್ಟವೆಯೇ ಹೊರತು ಉಪಾದೇಯವಾದ ಸರ್ವಜ್ಞತ್ವ, ಸರ್ವಕರ್ತೃತ್ವ, ಅನಾದಿಬೋಧತ್ವ, ಸ್ವತಂತ್ರತ್ವ, ನಿತ್ಯತೃಪ್ತತ್ವ, ಪರಿಪೂರ್ಣತ್ವಾದಿ ಗುಣಗಳು ಮತ್ತು ಅವನ ಸ್ವರೂಪಲಕ್ಷಣವೆನಿಸಿರುವ ಸಚ್ಚಿದಾನಂದಾದಿ ಗುಣಗಳು ನಿಷಿದ್ಧವಾಗಿಲ್ಲ. ಹಾಗಾದಪಕ್ಷದಲ್ಲಿ ಜಗತ್ಸೃಷ್ಟಿ, ಸ್ಥಿತಿ, ಲಯ, ತಿರೋಧಾನ ಮತ್ತು ಅನುಗ್ರಹವೆಂಬ ಪಂಚಕೃತ್ಯ ಕರ್ತೃತ್ವಾದಿಗಳೂ ಅವನಿಗಿಲ್ಲವೆಂದು ಹೇಳಬೇಕಾಗುತ್ತದೆ.

ಶ್ರುತಿಗಳಲ್ಲಿ ಪರಮಾತ್ಮನ ಶರೀರವರ್ಣನೆಯ ಅನೇಕ ಅವತರಣಗಳೇ ಮೇಲಿಂದಮೇಲೆ ಕಂಡುಬರುತ್ತವೆ. "ತ್ರಿಯಂಬಕಂ ಯಜಾಮಹೇ" "ನಮೋ ಹಿರಣ್ಯ ಬಾಹವೇ, ಹಿರಣ್ಯವರ್ಣಾಯ ಹಿರಣ್ಯರೂಪಾಯ, ಹಿರಣ್ಯಪತಯೇಽಂಬಿಕಾಪತಯೇ ಉಮಾಪತಯೇ ನಮೋ ನಮಃ" "ಉಮಾಸಹಾಯಂ ಪರಮೇಶ್ವರಂ ಪ್ರಭುಂ ತ್ರಿಲೋಚನಂ ನೀಲಕಂಠಂ ಪ್ರಶಾಂತಂ" "ಯಾತೇ ರುದ್ರ ಶಿವಾ ತನೂರಘೋರಾಪಾಪಕಾಶಿನೀ" "ಸ್ಥಿರೇಭಿರಂಗೈಃ ಪುರುರೂಪ ಉಗ್ರಃ" ಮುಂತಾದ ಶ್ರುತಿಗಳು ಪರಮಾತ್ಮನ ಅಲೌಕಿಕವೂ ದಿವ್ಯವೂ ಆದ ಶರೀರಾವಯವಗಳನ್ನು ವರ್ಣಿಸಿವೆ. ಇದರಿಂದ ಪರಮಾತ್ಮನಿಗೆ ಪಾಂಚಭೌತಿಕವಾದ ಶರೀರವಿಲ್ಲವೇ ಹೊರತು ತೇಜೋಮಯವಾದ ದಿವ್ಯ ವಿಭೂತ್ಯಾತ್ಮಕ ಲೀಲಾಶರೀರವನ್ನು ವೇದಾಗಮಗಳು ವಿಪುಲವಾಗಿ ವರ್ಣಿಸಿವೆ.

ಸರ್ವಸ್ವತಂತ್ರನಾದ ಶಿವನಿಗೆ ಮೂರ್ತಾಮೂರ್ತೋಭಯ ಶರೀರವುಂಟೆಂಬುದನ್ನು

"ದ್ವೇವಾವ ಬ್ರಹ್ಮಣೋ ರೂಪೇ ಮೂರ್ತಂ ಚಾಮೂರ್ತಮೇವ ಚ" ಇತ್ಯಾದಿ ಶ್ರುತಿಷು ಪವನಾದಿವನ್ಮೂರ್ತತ್ವಮುಪದಿಷ್ಟಂ। ಅಮೂರ್ತಸ್ಯ ಪವನಸ್ಯ ವೃಕ್ಷಕಂಪನೋತ್ಪಾಟನಾದಿ ಸಾಮರ್ಥ್ಯಂ ದೃಷ್ಟಂ। ತಥಾ "ಅಪಾಣಿ ಪಾದೋ ಜವನೋ ಗ್ರಹೀತಾ ಪಶ್ಯತ್ಯಚಕ್ಷುಸ್ಸಶೃಣೋತ್ಯಕರ್ಣಃ" ಇತಿ ಶ್ವೇತಾಶ್ವತರೇ ॥ "ಅಪಾಣಿಪಾದೋಽಹಮಚಿಂತ್ಯಶಕ್ತಿಃ ಪಶ್ಯಾಮ್ಯಚಕ್ಷುಸ್ಸಶೃಣೋತ್ಯಕರ್ಣಃ" ಇತಿ ಕೈವಲ್ಯೇ॥ ಶಿವಸ್ಯ ಬ್ರಹ್ಮಣಃ ಶರೀರೇಂದ್ರಿಯಾದಿ ನಿರಪೇಕ್ಷತಯಾ ಸರ್ವಜ್ಞತ್ವಾದಿ..........ಸರ್ವ ಪುರುಷಹೇತುತ್ವಾದಿಕಮುಪದಿಷ್ಟಂ"

—ಶ್ರೀಕರ ಭಾಷ್ಯೇ ಭೋಕ್ತ್ರಾಪತ್ಯಧಿಕರಣಂ (೨. ೧. ೧೩)

"ಪರಮೇಶ್ವರಸ್ಯ ಶರೀರಪರಿಗ್ರಹವಾದೇಽಪಿ ನ ಸುಖದುಃಖಾದಿ ಪ್ರಾಪ್ತಿಃ। ತಚ್ಛರೀರಸ್ಯ ಕರ್ಮಜನ್ಯತ್ವಾಭಾವಾತ್। ಸ್ವತಂತ್ರತ್ವಾಚ್ಚ। ಬ್ರಹ್ಮೇಶ್ವರ ಶಿವ ಮಹಾದೇವ ಶಂಕರಾದಿಶಬ್ದಾನಾಂ ಘಟಕುಂಭಕಲಶ ಶಬ್ದಾದಿವತ್ಪರ್ಯಾಯತ್ವಮೇವ"–ಕೃತ್ಸ್ನ ಪ್ರಸಕ್ತ್ಯಧಿಕರಣಂ(೨. ೧. ೯. ೨೬)

ಎಂಬಲ್ಲಿ ಅಮೂರ್ತವಾದ ಪವನಕ್ಕೆ ಮರಗಳನ್ನು ಉರುಳಿಸುವ ಸಾಮರ್ಥ್ಯವು ಎಲ್ಲರ ಅನುಭವದಲ್ಲಿದೆ. ಅದರಂತೆ ಶಿವನು ನಮ್ಮಂತೆ ಕೈಕಾಲುಗಳಿಲ್ಲದವನಾದರೂ ಅವನು "ಶ್ರೋತ್ರಸ್ಯ ಶ್ರೋತ್ರಂ ಚಕ್ಷುಷಶ್ಚಕ್ಷುಃ" ಎಂದರೆ ಇಂದ್ರಿಯಗಳಿಗೆ ಇಂದ್ರಿಯವಾಗಿರುವುದರಿಂದ ಆತನಿಗೆ ಅಸಾಧ್ಯವಾದುದು ಯಾವುದೂ ಇಲ್ಲ. ಮತ್ತು ಅವನ ಶರೀರವು ಕರ್ಮಜನ್ಯವಲ್ಲದ್ದರಿಂದ ಅದಕ್ಕೆ ಸುಖದುಃಖಾದಿ ಪ್ರಾಪ್ತಿಯಿರುವುದಿಲ್ಲ"ವೆಂದು ಭಗವತ್ಪಾದ ಶ್ರೀಪತಿ ಪಂಡಿತಾರಾಧ್ಯರು ತಮ್ಮ ಸೂತ್ರ ಭಾಷ್ಯದಲ್ಲಿ ಸಮರ್ಥಿಸಿದ್ದಾರೆ.

"ಶಿವಸ್ಯಾವಯವತ್ವೇನ ಮಹಾಕೈಲಾಸಾದ್ಯಪ್ರಾಕೃತ ದಿವ್ಯ ವೈಭವ ಸ್ಥಾನೇಷು ಸ್ಥಿತ್ವಾ ತದುಪಾಸಕಾನಾಂ ಭಕ್ತಾನಾಂ ಸಾಲೋಕ್ಯಾದಿ ತ್ರಿವಿಧ ನಿತ್ಯಕಲ್ಯಾಣ ವಿಭೂತಿಂ ದತ್ವಾ ನಿರವಯವ ಚಿದ್ಘನೋಪಾಸಕಾನಾಂ ನಿರಸ್ತ ಸಮಸ್ತಕಾಮಾದಿ ದೋಷಕಲಂಕಾನಾಂ ಭಕ್ತಾನಾಂ ಕೈವಲ್ಯವಿಭೂತ್ಯಾತ್ಮಕ ಸ್ವಪ್ರಾಪ್ತಿಂ ವಿದಧತಿ। ತಸ್ಮಾದುಭಯೋಪಾಸನಮಪಿ ಯುಕ್ತಂ"

—ಶ್ರೀಕರಭಾಷ್ಯ, ಪು. ೨೦೩

ಎಂದರೆ ಮೂರ್ತಾಮೂರ್ತಸ್ವರೂಪನಾದ ಪರಶಿವನು ತಿಳಿಮುಪ್ಪವೇ ಗಟ್ಟಿಗೊಂಬಂತೆ(ಘೃತಕಾಠಿನ್ಯನ್ಯಾಯ); ಭಕ್ತರ ಪ್ರಾರ್ಥನೆಯಂತೆ ಮೂರ್ತನೆನಿಸುತ್ತಾನೆ. ಇದನ್ನೇ ಮಹಾನುಭಾವಿ ಬಸವಣ್ಣನವರು "ಜಗದಗಲ ಮುಗಿಲಗಲ ಮಿಗೆಯಗಲ ನಿಮ್ಮಗಲ. ಪಾತಾಳದಿಂದತ್ತತ್ತ ನಿಮ್ಮ ಶ್ರೀ ಚರಣ........ಎನ್ನ ಕರಸ್ಥಳಕ್ಕೆ ಬಂದು ಚುಳುಕಾದಿರಯ್ಯ" ಎಂದಿದ್ದಾರೆ. ಆತ ಮೇರು ಮಂದಿರ ಕೈಲಾಸಾದಿಗಳಲ್ಲಿ ಜ್ಯೋತಿರ್ಲಿಂಗಾದಿ ರೂಪದಿಂದಲೂ ಅಥವಾ ದೇವ, ಋಷಿ, ಮಾನವರಿಂದ ಪ್ರತಿಷ್ಠಿಸಿದ ಮೂರ್ತಿಗಳ ರೂಪದಿಂದಲೂ ಮೂಡಿದ್ದು ಭಕ್ತರ ಉಪಾಸನಾದಿಗಳಿಂದ ಸಂತುಷ್ಟನಾಗಿ ಅವರವರಿಗೆ ಅಭ್ಯುದಯ ನಿಃಶ್ರೇಯಸ್ಸುಗಳನ್ನು ಪ್ರದಾನಮಾಡುವನೆಂದು ಎಲ್ಲ ಆಚಾರ್ಯರೂ ತಮ್ಮ ತಮ್ಮ ಸೂತ್ರ ಭಾಷ್ಯಾದಿಗಳಲ್ಲಿ ಸಮರ್ಥಿಸಿರುತ್ತಾರೆ.

## ಧ್ವನಿ ಮತ್ತು ಮೂರ್ತಿ

ಭಕ್ತರು ಅನನ್ಯಭಾವದಿಂದ ಪರಮಾತ್ಮನ ದಿವ್ಯ ಗುಣವರ್ಣನಮಾಡಿ ಪರಮಾತ್ಮನನ್ನು ಸಾಕ್ಷಾತ್ಕಾರಮಾಡಿಕೊಂಡಿರುವ ಬಗೆಗೆ ಪುರಾಣೇತಿಹಾಸಗಳಲ್ಲಿ ವಿಪುಲವಾದ ವರ್ಣನೆಗಳಿವೆ. ಅಷ್ಟಲ್ಲದೆ ಇವು ವೈಜ್ಞಾನಿಕ ದೃಷ್ಟಿಯಿಂದಲೂ ಸಹ ಸಮರ್ಥನೀಯಗಳು ಎಂಬ ಬಗ್ಗೆ ಹೃಷೀಕೇಶ ನಿವಾಸಿಗಳೂ ಯೋಗಸಿದ್ಧರೂ ಆದ ಸ್ವಾಮಿ ಶಿವಾನಂದ ಸರಸ್ವತಿಯವರ ಮಾತುಗಳು ಸ್ತೋತ್ರ-ಜಪ-ಪಾರಾಯಣಾದಿಗಳ ಮೇಲೆ ವಿಶೇಷ ಬೆಳಕನ್ನು ಬೀರುತ್ತವೆ.೧

"ಧ್ವನಿತರಂಗಗಳು ನಿರ್ದಿಷ್ಟ ರೂಪಗಳನ್ನು ಮೂಡಿಸುವುವು. ಪ್ರತಿಯೊಂದು ಧ್ವನಿಯೂ ಅಗೋಚರವಾದ ಪ್ರಪಂಚದಲ್ಲಿ ಒಂದು ರೂಪವನ್ನು ಸೃಷ್ಟಿಸುವುದು. ಧ್ವನಿಗಳ ಸಮೂಹವು ಹಲವು ಮೂರ್ತಿಗಳನ್ನು ಸೃಷ್ಟಿಸುವುದು. ವೈಜ್ಞಾನಿಕ ಗ್ರಂಥಗಳಲ್ಲಿ ಕೆಲವು ನಾದಯಂತ್ರಗಳಿಂದ ಹೊರಡಿಸಿದ ಧ್ವನಿ ಮರಳಮೇಲೆ ಬಗೆಬಗೆಯ ರೇಖಾಚಿತ್ರಗಳನ್ನು ಮೂಡಿಸಿದ ಪ್ರಯೋಗಗಳ ವಿವರವಿದೆ. ಆರೋಹಣ ಅವರೋಹಣವನ್ನು ಅನುಸರಿಸಿ ಧ್ವನಿಯ ಉಚ್ಚಾರಣೆ ನಿರ್ದಿಷ್ಟ ರೇಖಾಚಿತ್ರಗಳನ್ನು ಮೂಡಿಸುವುವೆಂದು ತೋರಿಸಲಾಗಿದೆ."

ಭಾರತೀಯ ಸಂಗೀತಶಾಸ್ತ್ರ ಗ್ರಂಥಗಳಲ್ಲಿ ಪ್ರತಿಯೊಂದು 'ರಾಗ' 'ರಾಗಿಣಿ'ಯೂ ಒಂದೊಂದು ಅಧಿರೂಪವನ್ನು ಹೊಂದಿದೆಯೆಂದು ವಿವರವಾಗಿ ವರ್ಣಿಸಿದೆ. 'ಮೇಘ'ರಾಗವು ಆನೆಯ ಮೇಲೆ ಕುಳಿತಿರುವ ಒಂದು ಉನ್ನತ ವ್ಯಕ್ತಿಯ ರೂಪವೆಂದು ಹೇಳಿದೆ. ಪುಷ್ಪಾಲಂಕೃತನಾದ ಸುಂದರ ಯುವಕನು ವಸಂತರಾಗದ ರೂಪವೆಂದು ವರ್ಣಿಸಲಾಗಿದೆ. ಇವುಗಳ ಅರ್ಥವೇನೆಂದರೆ ಆಯಾ 'ರಾಗ' 'ರಾಗಿಣಿ'ಗಳನ್ನು ಶಾಸ್ತ್ರರೀತಿಯಿಂದ ಹಾಡಿದಾಗ ವಿಶಿಷ್ಟ ರೂಪವನ್ನು ಸೃಷ್ಟಿಸುವ ಶಬ್ದತರಂಗಗಳನ್ನು ಮೂಡಿಸುವುವು. ಈಗೀಗ "Voice Figures" ಗ್ರಂಥದ ಲೇಖಿಕೆ ಮಿಸೆಸ್ ವಾಟ್ಸ್ ಹ್ಯೂಸ್ ಎಂಬಾಕೆ ನಡೆಸಿರುವ ಪ್ರಯೋಗಗಳಿಂದ ಈ ಅಭಿಪ್ರಾಯಕ್ಕೆ ಪುಷ್ಟಿ ದೊರೆ

---

೧ಶಿವೈಕ್ಯ ಸ್ವಾಮಿ ಶಿವಾನಂದ ಸರಸ್ವತಿ ವಿರಚಿತ "ಜಪಯೋಗ" (ಕನ್ನಡ) (ಪು. ೩೦-೩೫) ಆನಂದ ಕುಟೀರ, ಹೃಷೀಕೇಶಮಾರ್ಗ, ಹಿಮಾಲಯ.

ತಿದೆ. ಆಕೆ ಲಾರ್ಡ್ ಲೆಯಿಟನ್‌ರವರ ಸಭಾಭವನದಲ್ಲಿ ವಿಶೇಷಜ್ಞರ ಸಭೆಯೊಂದರಲ್ಲಿ ಸಚಿತ್ರ ಉಪನ್ಯಾಸವೊಂದನ್ನು ಕೊಟ್ಟಳು. ಹಲವು ವರ್ಷಗಳ ತನ್ನ ಶ್ರಮದ ಫಲವಾಗಿ ತಾನು ಕಂಡುಹಿಡಿದಿರುವ ವೈಜ್ಞಾನಿಕ ಸಂಶೋಧನೆಗಳನ್ನು ಕುರಿತು ವರ್ಣಿಸಿದಳು. ಸತೀಹ್ಯೂಳು (Eidophone) 'ಐಡೋಫೋನ್' ಎಂಬ ಯಂತ್ರದೊಳಕ್ಕೆ ಹಾಡಿದಳು. ಅದರಲ್ಲಿ ಧ್ವನಿಗ್ರಾಹಕ ಸಾಧನವೂ ತೆಳುವಾದ ಪರದೆಯೂ ಇತ್ತು. ಸೂಕ್ಷ್ಮವಾದ ಚಲಿಸುವ ಮಾಧ್ಯಮವೊಂದರ ಮೂಲಕ ತಾನು ಉಚ್ಚರಿಸುವ ಪ್ರತಿಯೊಂದು ಸ್ವರವೂ ಒಂದೊಂದು ವಿಶಿಷ್ಟರೂಪವನ್ನು ತಾಳುವುದನ್ನು ತೋರಿಸಿದಳು. ತನ್ನ ಉಪನ್ಯಾಸದ ಕೊನೆಯಲ್ಲಿ ಆಕೆ ಆ ಪರದೆಯ ಮೇಲೆ ಕೆಲವು ಸಣ್ಣ ಬೀಜಗನ್ನಿಟ್ಟಳು. ಆಕೆಯ ಧ್ವನಿಯಿಂದ ಮೂಡಿದ ವಾಯುತರಂಗಗಳಿಂದ ಆ ಬೀಜಗಳು ನಿರ್ದಿಷ್ಟವಾದ ರೇಖಾಗಣಿತದ ಆಕೃತಿಯನ್ನು ತಾಳಿದವು.

ಅನಂತರ ಆಕೆ ಹಲವು ಬಗೆಯ ಧೂಳುಗಳನ್ನು ಉಪಯೋಗಿಸಿದಳು. ಈ ಪ್ರದರ್ಶನವನ್ನು ನೋಡಿದ ಸುದ್ದಿಗಾರನೊಬ್ಬನು "ಈ ಆಕೃತಿಗಳು ಅತಿ ವಿಚಿತ್ರ ರೀತಿಯ ರೇಖಾಗಣಿತದ ಚಿತ್ರಗಳು—ಇವುಗಳಲ್ಲಿ ನಕ್ಷತ್ರಗಳು, ಸುರುಳಿಗಳು, ಸರ್ಪಗಳು ಮತ್ತು ಆಶ್ಚರ್ಯಕರವಾದ ವಿವಿಧ ಆಕೃತಿಗಳನ್ನು ಕಾಣಬಹುದು" ಎಂದು ವರ್ಣಿಸಿದನು. ಆಕೆಯ ಮೊದಲ ಪ್ರದರ್ಶನದಲ್ಲಿ ತೋರಿಸಿದ ವಿಶೇಷಗಳು ಇವು. ಒಮ್ಮೆ ಸತೀಹ್ಯೂಳು ಒಂದು ಸ್ವರವನ್ನು ಆಲಾಪನೆಮಾಡುತ್ತಿರುವಾಗ ವಿಷ್ಣುಕ್ರಾಂತಿ (Daisy) ಹೂವಿನ ಜಾತಿಯ ಸುಂದರವಾದ ಹೂವೊಂದು ಕಾಣಿಸಿಕೊಂಡು ಅದೃಶ್ಯವಾಯಿತು. 'ಅದನ್ನು ಮತ್ತೆ ಹಾಡಿ ಆ ಆಕೃತಿ ಕಾಣಲು ನಾನು ಹಲವು ವಾರಗಳು ಪ್ರಯತ್ನಿಸಬೇಕಾಯಿತು' ಎಂದು ಆಕೆ ಹೇಳಿದಳು. ಈಗ ಆಕೆ ಆ ಸ್ವರದ ನಿರ್ದಿಷ್ಟವಾದ ಏರು ತಗ್ಗುಗಳನ್ನು ಬಲ್ಲಳು. ಆಕೆ ಈ ಪ್ರಯೋಗವನ್ನು ಮತ್ತೊಮ್ಮೆ ಪ್ರದರ್ಶಿಸಿದ ಕಾಲದಲ್ಲಿ ನೋಡಿದವರು ಆಶ್ಚರ್ಯದಲ್ಲಿ ಮುಳುಗಿದರು. "ಏನಾಶ್ಚರ್ಯ ! ಎಷ್ಟು ಸುಂದರವಾಗಿವೆ!" ಎಂದು ಲಾರ್ಡ್ ಲೇಟನ್‌ರ ಸಭಾಭವನದಲ್ಲಿ ಈ ಪ್ರದರ್ಶನವನ್ನು ದರ್ಶಿಸಿದ ಸಭಿಕರು ಉದ್ಗಾರ ತೆಗೆದರು. ಪುಷ್ಪಗಳ ತರುವಾಯ ಜಲಚರಗಳೂ, ಸುಳಿಸುಳಿಯಾಗಿ ತಿರುಗುವ ವಕ್ರರೇಖೆಗಳೂ, ವಿಚಿತ್ರ ವರ್ಣಪ್ರಕಾಶದಿಂದ ಕೂಡಿದವೂ ಕಾಣಿಸಿಕೊಂಡವು. ಅನಂತರ ಸಮುದ್ರ, ಅಲೆ,

ಬಂಡೆಗಳು ಮುಂತಾದವುಗಳ ಹಿನ್ನಲೆಯಲ್ಲಿ ಫಲಭರಿತ ವೃಕ್ಷಗಳೂ, ಅವುಗಳಿಂದ ಉದುರುತ್ತಿದ್ದ ಹಣ್ಣುಗಳೂ ಕಾಣಿಸಿದವು. ನೋಡುತ್ತಿದ್ದವರು "ಆಹಾ, ಇವು ಜಪಾನಿನ ಪ್ರಾಕೃತಿಕ ದೃಶ್ಯಗಳಂತಿವೆಯಲ್ಲ" ಎಂದರಂತೆ.

ಫ್ರಾನ್ಸ್‌ನಲ್ಲಿ ಮ್ಯಾಡರ್ವ್ ಪಿನ್‌ಲ್ಯಾಂಗ್ ಎಂಬಾಕೆ ಮೇರಿ ಮಾತೆಯನ್ನು ಕುರಿತು "O Eve Marium" ಎಂಬ ಕೀರ್ತನೆ ಹಾಡುತ್ತಿರಲು ಮಡಲಲ್ಲಿ ಕ್ರಿಸ್ತ ಶಿಶುವಿನೊಡನೆ ಮೇರಿ ಮಾತೆಯ ಮೂರ್ತಿ ಗೋಚರವಾಯಿತಂತೆ. ಫ್ರಾನ್ಸಿನಲ್ಲಿ ವಿದ್ಯೆ ಕಲಿಯುತ್ತಿದ್ದ ಬಂಗಾಲಿ ವಿದ್ಯಾರ್ಥಿಯೊಬ್ಬನು ಭೈರವ ರಾಗವನ್ನು ಆಲಾಪನೆ ಮಾಡಲು ಭೈರವ ಮೂರ್ತಿಯೂ ಅವನ ವಾಹನವಾದ ನಾಯಿಯೂ ಕಾಣಿಸಿತಂತೆ.

ಈ ರೀತಿಯಲ್ಲಿ ಭಗವನ್ನಾಮವನ್ನು ಎಡೆಬಿಡದೆ ಕೀರ್ತನೆ ಮಾಡುವುದರಿಂದ ದೇವರ ಅಥವಾ ನೀವು ಆರಾಧಿಸುವ ಮಂತ್ರದ ಅಧಿದೇವತೆಯ ವಿಶಿಷ್ಟ ರೂಪವು ಕಾಲಕ್ರಮದಲ್ಲಿ ಗೋಚರವಾಗುವುದು. ಈ ರೂಪವು ಆ ದೇವತೆಯ ಅಮೋಘ ಶಕ್ತಿಯನ್ನು ಕೇಂದ್ರೀಕರಿಸಿ ಅರ್ಚಕ (ಉಪಾಸಕ)ನ ಹೃದಯವನ್ನು ಪ್ರವೇಶಿಸುವುದು.

ಸಾಧಕನು ಧ್ಯಾನದ ಹಂತವನ್ನು ಮುಟ್ಟಿದಾಗ ಅಂತರ್ವೃತ್ತಿಯ ಪ್ರವಾಹವು ವೃದ್ಧಿಯಾಗುವುದು. ಆಳವಾಗಿ ಧ್ಯಾನದಲ್ಲಿ ಮುಳುಗಿದಂತೆಲ್ಲ ಗುಣವು ವೃದ್ಧಿಯಾಗುವುದು. ಮೇಲ್ಮುಖವಾದ ಮನಸ್ಸಿನ ಏಕಾಗ್ರತೆಯಿಂದ ಬ್ರಹ್ಮರಂಧ್ರದಿಂದ ಈ ಶಕ್ತಿಯು ಹೊರಗೆ ಹೋಗುವುದು. ಪ್ರತಿಯಾಗಿ ಸೂಕ್ಷ್ಮ ಚುಂಬಕ ಶಕ್ತಿಯ ಧಾರೆ ಪ್ರವೇಶಿಸುವುದು. ಈ ಧಾರೆಯ ಪ್ರವೇಶದಿಂದ ಆಗುವ ಅನುಭವವು ಮೈಯಲ್ಲಿ ಒಂದು ವಿಚಿತ್ರ ಸ್ಪಂದವನ್ನುಂಟುಮಾಡಿ ವಿದ್ಯುಚ್ಛಕ್ತಿಯಲ್ಲಿ ಸ್ನಾನಮಾಡಿದಂತೆ ಅನುಭವವಾಗುವುದು.

ಈ ಮೇಲಿನ ಪ್ರಯೋಗಗಳಿಂದ ೧) ಧ್ವನಿಗಳು ಆಕೃತಿಗಳನ್ನು ಮೂಡಿಸುವವು. ೨) ವಿಶಿಷ್ಟ ಧ್ವನಿಗಳು ವಿಶಿಷ್ಟರೂಪಗಳನ್ನು ಮೂಡಿಸುವವು. ೩) ನೀವು ಒಂದು ವಿಶಿಷ್ಟ ರೂಪವನ್ನು ಕಲ್ಪಿಸಬೇಕಾದರೆ ಗೊತ್ತಾದ ಒಂದು ಸ್ವರವನ್ನು ನಿಗದಿಯಾದ ರಾಗದಲ್ಲಿ ಹಾಡಬೇಕು. "ಓಂ ನಮಃ ಶಿವಾಯ" ಎಂಬ ಷಡಕ್ಷರ ಮಂತ್ರದ ಜಪವು ಶಿವನ ರೂಪವನ್ನು ಮೂಡಿಸುವದು. "ಓಂ ನಮೋ ನಾರಾಯಣಾಯ" ಎಂಬ ವಿಷ್ಣುವಿನ ಅಷ್ಟಾಕ್ಷರ ಮಂತ್ರವು ವಿಷ್ಣು

ವಿನ ಮೂರ್ತಿಯನ್ನು ಮೂಡಿಸುವುದು........ಈ ಕಾರಣದಿಂದಲೇ ದೇವತೆಯ ಮಂತ್ರವೂ ದೇವತೆಯೇ ಎಂದು ಹೇಳಲಾಗಿದೆ. "ಮಂತ್ರಾತ್ಮಕೋ ದೇವಃ" ಮಂತ್ರಗಳನ್ನು ಬಿಟ್ಟು ದೇವರಿಲ್ಲ ಎಂಬ ಮೀಮಾಂಸಕರ ಮಾತು ಇದನ್ನೇ ಪುಷ್ಟೀಕರಿಸುತ್ತದೆ. ಪುರಶ್ಚರಣೆ (ಪು. ೪೫೪) ಯಿಂದ ಮಂತ್ರಸಿದ್ಧಿಯನ್ನು ಪಡೆದವನು ಉಚ್ಚರಿಸಿದಾಗ ಉಂಟಾದ ಶಬ್ದತರಂಗಗಳು ವಿಶಿಷ್ಟಮೂರ್ತಿ ಯನ್ನು ಮೂಡಿಸುವುವು."

ಮೇಲೆ ಕಂಡ ವಿವರಣದಿಂದ ಮೂರ್ತಿ ಪೂಜೆಯು ಶಿವಜ್ಞಾನಕ್ಕೆ ಕಾರಣ, ಶಿವಜ್ಞಾನವು ಮುಕ್ತಿಗೆ ಕಾರಣ ಎಂಬ ಆಗಮೋಕ್ತಿಯನ್ನು ವಿಜ್ಞಾನದ ಒರೆಗಲ್ಲಿಗೆ ಹಚ್ಚಿ ದೃಢಪಡಿಸಿಕೊಂಡಂತಾಗಿದೆ. ಅತಿ ಪುರಾತನವಾದ ಮೂರ್ತಿಪೂಜೆ ವೇದಾಗಮಾದಿಗಳಲ್ಲಿ ಹೊರಹೊಮ್ಮಿ ಸಂತರ ಜೀವನದಲ್ಲಿ ನಿರ್ದುಷ್ಟವೆನಿಸಿ ಭಾರತ ಸಂಸ್ಕೃತಿಯ ಜೀವ ಜೀವಾಳವಾಗಿದೆ. ಅತ್ಯಂತ ಪುರಾತನ ಕಾಲದಿಂದ ಕೇವಲ ಭಾರತ ಮಾತ್ರವಷ್ಟೇ ಅಲ್ಲದೆ ಪ್ರಪಂಚದ ಅನೇಕ ಭಾಗಗಳಲ್ಲಿಯೂ ಸಹ ಪ್ರಸಿದ್ಧವಾಗಿರುವ ಶಿವಲಿಂಗಗಳು ಬೇರೆ ಬೇರೆ ಹೆಸರಿನಿಂದ ವಿಖ್ಯಾತವಾಗಿರುವುದು ಇಂದಿಗೂ ಸುಪ್ರಸಿದ್ಧವಿದೆ.

## ವೀರಶೈವರು ಮತ್ತು ಸ್ಥಾವರಲಿಂಗಗಳು

ಸ್ಥಾವರಲಿಂಗಾರ್ಚನವು ವೀರಶೈವರಿಗೆ ತಾತ್ವಿಕ ದೃಷ್ಟಿಯಿಂದ ನಿಷಿದ್ಧ. ಏಕೆಂದರೆ 'ಲಿಂಗಪತಿ ಶರಣಸತಿ' ಎಂಬ ನ್ಯಾಯದಿಂದ ವೀರಶೈವರಿಗೆ ಲಿಂಗ ಪಾತಿವ್ರತ್ಯ ಅತ್ಯಗತ್ಯ. ಪತಿವ್ರತೆಯೆನಿಸಿದ ಸತಿ ತನ್ನ ಪತಿಯಲ್ಲಿ ತ್ರಿಕರಣಗಳನ್ನು ಸಮರ್ಪಿಸಿ ಅನನ್ಯ ಶರಣಳಾಗಿರುವಂತೆ ಶರಣನು ತನ್ನ ಇಷ್ಟ-ಪ್ರಾಣ-ಭಾವಲಿಂಗಾರ್ಚನಾದಿಗಳಲ್ಲಿಯೇ ನಿರತನಾಗಿರಬೇಕು. ಆದರೆ ನಿಜವಾದ ಪತಿವ್ರತೆ ಪತಿಯಲ್ಲಿ ನಿಷ್ಠೆಯುಳ್ಳವಳಾದಮಾತ್ರಕ್ಕೆ ಪತಿಯ ಬಂಧು-ಬಳಗ ಮತ್ತು ಇಷ್ಟಮಿತ್ರರನ್ನು ಅಲ್ಲಗಳೆಯಳು. ಬದಲಾಗಿ ಅವಳು ಅವರನ್ನು ಸೂಕ್ತವಾಗಿ ಉಪಚರಿಸಿ ಸದ್ಗೃಹಿಣಿಯೆನಿಸುವಳು. ಅದರಂತೆ ವೀರಶೈವನು ಲಿಂಗ ಪತಿಯಲ್ಲಿ ಅನನ್ಯ ಶರಣನೆನಿಸಿದರೂ ಆತನು ಶಿವನ ಲೀಲಾವಿಭೂತಿಗಳೆನಿಸಿದ ಚಂದ್ರಶೇಖರಾದಿ ಲೀಲಾವಿಭೂತಿ ಮೂರ್ತಿಗಳನ್ನೂ, ಆತನ ಪ್ರಮಥ ಗಣ ವರ್ಗಕ್ಕೆ ಸೇರಿದ ವೀರ, ನಂದಿ, ಸ್ಕಂದ, ವೃಷಭ, ಭೃಂಗಿ, ಗಣಪತಿ, ವೀರ

ಭದ್ರಾದಿ ಮೂರ್ತಿಗಳನ್ನೂ, ಶಿವಭಕ್ತಾಗ್ರೇಸರನ್ನೂ ಒಂದು ದೃಷ್ಟಿಯಿಂದ ಪರ ಶಿವನ ವಿಮರ್ಶ ಶಕ್ತಿಯೇ ಆಗಿರುವ ವಿಷ್ಣು ಮತ್ತು ಆತನ ಅವತಾರಮೂರ್ತಿಗಳು, ಮಾರುತಿ ಮೊದಲಾದ ಭಕ್ತರು, ಪರಮೇಶ್ವರನ ನಿರಂಕುಶಾಧಿಪತ್ಯಕ್ಕೆ ಒಳಪಟ್ಟು ಅವನ ಅನುಗ್ರಹದಿಂದ ಪ್ರಪಂಚದ ಸೃಷ್ಟಿ ಸ್ಥಿತ್ಯಾದಿ ಅಧಿಕಾರ ಸ್ಥಾನದಲ್ಲಿರುವವರು, ದಿಕ್ಪಾಲಕರು, ನವಗ್ರಹಗಳು, ನಾಗರು ಮುಂತಾದ ದೇವಯೋನಿ ವಿಶೇಷಗಳನ್ನಾಗಲಿ,ಭೂಲೋಕದಲ್ಲಿ ಶಿವಭಕ್ತಾವತಂಸರೆನಿಸಿರುವ ಋಷಿಪುರಾತನರು,ಬಸವಾದಿ ಪ್ರಮಥರನ್ನಾಗಲಿ ಅಲ್ಲಗಳೆಯಲಾರನು. ಮೇಲಾಗಿ ಐಹಿಕಾಭ್ಯುದಯ ಸಾಧನೆಯನ್ನು ಬಯಸುವ ಸಾಮಾನ್ಯ ಜನತೆಯ ಪ್ರಾರ್ಥನೆಯಂತೆ ಆಯಾ ದೇವತೆಗಳ ಅರ್ಚನಾದಿ ಕ್ರಿಯೆಗಳನ್ನಾಗಲಿ ಪ್ರತಿಷ್ಠೆ, ಮಹೋತ್ಸವ ಮುಂತಾದ ಆಗಮಿಕ ಕ್ರಿಯೆಗಳನ್ನಾಗಲಿ "ಸತ್ಯಶುದ್ಧ ಕಾಯಕ"ವೆಂಬ ದೃಷ್ಟಿಯಿಂದ ನೆರವೇರಿಸಿಕೊಡುವುದು ದೋಷಾವಹವಾಗಲಾರದು. ಇದೇ ಸಮಸ್ಯೆಯನ್ನು ಎತ್ತಿ ಶ್ರೀ ನೀಲಕಂಠ ಶಿವಾಚಾರ್ಯರು ಬಹು ಸುಂದರವಾಗಿ ಬಿಡಿಸಿದ್ದಾರೆ.

"ಅತ್ರಾಯಂ ಸಿದ್ಧಾಂತಃ—ಶಿವಸ್ಯೈವಾಗಮೋಕ್ತಮಸ್ತ್ಯೇತತ್ಸರ್ವಂ ಪೂರ್ವೋತ್ತರ ವಿರೋಧಿ ಸ್ನಾನ, ಸಂಧ್ಯಾ, ವೈದಿಕತಯಾ ಭಸ್ಮ ರುದ್ರಾಕ್ಷ ಧಾರಣಂ, ಮಂತ್ರರಾಜ ಜಪಃ, ದ್ವಾರಪಾಲಾರ್ಚನಂ, ಪೀಠಾರ್ಚನೇ ವಿಷ್ಣ್ವಾದಿ ದೇವತಾಂತರ ಭಜನಪ್ರಸಕ್ತಿಃ, ಉಪಚಾರೋಪಯುಕ್ತ ಮುದ್ರಾ ವಿಶೇಷಾಃ ಕರದ್ವಯವ್ಯಾಪಾರ ಸಾಧ್ಯಾಃ, ವೇದಿಕಾದೌ ಲಿಂಗಸ್ಥಾಪನಂ, ಸವ್ಯಪಾಣಿನಾ ಘಂಟಾನಾದಪುರಸ್ಸರಂ ದೀಪದರ್ಶನಾದಿ, ಕ್ವಚಿದ್ಧೋಮಃ, ಇತ್ಯಾದಿ ಸರ್ವಂ ಕಥಮುಪತದ್ಯತ ಇತ್ಯತ್ರಾಯಂ ನಿಷ್ಕರ್ಷಃ—

ಅನೇಕ ಜನ್ಮಸಿದ್ಧಾನಾಂ ಶ್ರೌತಸ್ಮಾರ್ತಾನುವರ್ತಿನಾಮ್ ।
ನರಾಣಾಂ ಕ್ಷೀಣಪಾಪಾನಾಂ ಶಿವೇ ಭಕ್ತಿಃ ಪ್ರಜಾಯತೇ ॥

ಇತ್ಯಾದ್ಯನೇಕ ಪ್ರಮಾಣ ಪರ್ಯಾಲೋಚನಯಾ ವೈದಿಕಕರ್ಮಣಾಂ ವೈಶೇಷ್ಯವರ್ಣನಾತ್ ಕರ್ಮಭಿಸ್ಸಾಧನೈಸ್ಸಾಧ್ಯರೂಪ ಶಿವಭಕ್ತೇರೇವ ವೀರಶೈವೈರಪಿ ಸಾಧನೀಯತ್ವಾತ್ ತದ್ವ್ಯತಿರಿಕ್ತ ದೇವತಾಂತರಭಜನಂ ಚ ನ ಪ್ರಾಧಾನ್ಯೇನಾಂಗೀಕುರ್ಮಃ । ಕಿಂತು ಪತಿರೂಪ ಪರಮೇಶ್ವರ ವಿಭೂತಿ

ವಿಶೇಷತ್ವೇನ ಸರ್ವಾಸಾಂ ದೇವತಾನಾಂ ಶಿವಪೂಜೋಪಯೋಗಿತ್ವೇನ ವರ್ಣನಂ ಪರಮಾಮೋದಃ । ನಾಸ್ತಿ ಕಶ್ಚಿದ್ವಿರೋಧಶಂಕಾವಕಾಶಃ”

—ಕ್ರಿಯಾಸಾರ ಭಾ. ii ಉ. ೧ಳ ಪು. ೩೩೭

ಅಭಿಪ್ರಾಯವಿಷ್ಟು—“ಇದೆಲ್ಲವೂ ಶಿವಾಗಮೋಕ್ತವೇ ಆದರೂ ಪೂರ್ವಾಪರ ವಿರೋಧಿಯಾದ ಸ್ನಾನ, ಸಂಧ್ಯಾ, ವೈದಿಕ ಭಸ್ಮರುದ್ರಾಕ್ಷಧಾರಣ ಮಂತ್ರಜಪ, ದ್ವಾರಪಾಲಕಾರ್ಚನ, ಪೀಠಪೂಜೆಯಲ್ಲಿ ವಿಷ್ಣು ಮೊದಲಾದ ಇತರ ದೇವತೋಪಾಸನ, ಉಪಚಾರಗಳಲ್ಲಿ ಹೇಳಿರುವ ಎರಡೂ ಕೈಗಳಿಗೆ ಸಂಬಂಧಿಸಿದ ಮುದ್ರಾಪ್ರದರ್ಶನ, ಪೀಠಗಳಲ್ಲಿ ಶಿವಲಿಂಗಾದಿಗಳನ್ನು ಪ್ರತಿಷ್ಠಿಸುವುದು, ಎಡಗೈಯಲ್ಲಿ ಗಂಟೆ ಬಾರಿಸುತ್ತಾ ದೀಪಾರ್ತಿ ಬೆಳಗುವುದು, ಹೋಮ ಮುಂತಾದುವು ವೀರಶೈವರಿಗೆ ಹೇಗೆ ಅನ್ವಯಿತ್ತವೆ ಎಂದರೆ ಆ ಬಗ್ಗೆ ಹೀಗೆ ನಿಷ್ಕರ್ಷಿಸಬಹುದು.

“ಎಷ್ಟೋ ಜನ್ಮಗಳಲ್ಲಿ ಶ್ರೌತಸ್ಮಾರ್ತಕರ್ಮಗಳನ್ನೆಸಗಿ ಪಾಪರಹಿತರಾಗಿ ಶುದ್ಧಾತ್ಮರಾದವರಿಗೆ ಶಿವನಲ್ಲಿ ಭಕ್ತಿ ಉದಿಸುತ್ತದೆ.” ಮುಂತಾದ ಅನೇಕ ಪ್ರಮಾಣಗಳನ್ನು ಪರ್ಯಾಲೋಚಿಸಿದಲ್ಲಿ ವೈದಿಕ ಕರ್ಮಗಳಲ್ಲಿ ವೈಶಿಷ್ಟ್ಯವಿರುವುದರಿಂದಲೂ, ಕರ್ಮಗಳೆಂಬ ಸಾಧನಗಳಿಂದ ಸಾಧ್ಯವೆನಿಸಿರುವ ಶಿವಭಕ್ತಿಯನ್ನು ವೀರಶೈವರೂ ಸಹ ಸಾಧಿಸಬೇಕಾಗಿರುವುದರಿಂದ ಶಿವೇತರ ದೇವತೋಪಾಸನಗಳು ವೀರಶೈವರಿಗೆ ಪ್ರಧಾನವಲ್ಲ. ಆದರೂ ಪತಿರೂಪನಾದ ಪರಮೇಶ್ವರನ ವಿಭೂತಿ ವಿಶೇಷಗಳೆನಿಸಿರುವ ವಿಷ್ಣು ಮೊದಲಾದ ಇತರ ದೇವತೆಗಳ ಉಪಾಸನಾದಿಗಳು ಶಿವಪೂಜೋಪಯೋಗಿಗಳೇ ಆದ್ದರಿಂದ ಹಾಗೆ ಮಾಡುವುದು ಸುವರ್ಣಕ್ಕೆ ಸುವಾಸನೆಯು ಬಂದಂತೆ ಆಪ್ಯಾಯಮಾನವೇ ಆಗುತ್ತದೆ. ಈ ವಿಷಯದಲ್ಲಿ ಸ್ವಲ್ಪವೂ ವಿರೋಧ ಸಂದೇಹಕ್ಕೆ ಅವಕಾಶವೇ ಇಲ್ಲ.” ಎಂದು ಸೂಚಿಸಲಾಗಿದೆ. ಮತ್ತೊಂದೆಡೆಯಲ್ಲಿ

ಬ್ರಹ್ಮ ವಿಷ್ಣು ಮೊದಲಾದವರು ಸೃಷ್ಟಿ-ಸ್ಥಿತಿ ಮುಂತಾದ ಕಾರ್ಯಗಳಲ್ಲಿ ತೊಡಗಿರುವುದು ಶಿವನ ಆಜ್ಞೆಯಿಂದಲೇ—

ಯಸ್ಯಾಜ್ಞಯಾ ಜಗತ್ಸ್ರಷ್ಟಾ ವಿರಿಂಚಿಃ ಪಾಲಕೋ ಹರಿಃ ।
ಸಂಹರ್ತಾ ಕಾಲರುದ್ರಾಖ್ಯೋ ನಮಸ್ತಸ್ಮೈ ಪಿನಾಕಿನೇ ॥

—ಬ್ರಹ್ಮೋತ್ತರ ಖಂಡೇ (ಶ್ರೀಕರಭಾಷ್ಯ ೧—೧—೧)

ಎಂದು ಹೇಳಿದೆ.

"ಶಿವವ್ಯತಿರಿಕ್ತ ದ್ವಾರಪಾಲಾರ್ಚನವು ವೀರಶೈವರಿಗೆ ಹೇಗೆ ಅನ್ವಯಿಸುತ್ತದೆ ಎಂದು ಪ್ರಶ್ನಿಸಿಕೊಂಡು

"ನಂದಿಕೇಶ್ವರಾದಿ ದ್ವಾರಪಾಲಾನಾಂ ಶಿವವಿಭೂತಿ ವಿಶೇಷತ್ವೇನ ಏಕ ಏವಾನೇಕಧಾ ವರ್ತತ" ಇತಿ ಶ್ರುತ್ಯನುರೋಧಾಚ್ಚ ತದೇಕತಾನತ್ವರೂಪ ವೀರಶೈವತ್ವಂ ಚ ತದಿತರದೇವತಾಂತರ ತದ್ಭಜಕಭಜನಾತಿರೇಕಃ । ಪ್ರಕೃತೇ ಚ ದ್ವಾರಪಾಲಾನಾಂ ಶಿವೈಕಾಜ್ಞಾಪರಿಪಾಲಾಕತ್ವೇನ ತೇಷ್ವಪಿ ಶಿವಾಭೇದಬುದ್ಧಿರೇವ ಕಾರ್ಯಾ । ತಥೈವಾಗಮಾಂತರೈಕ ವಾಕ್ಯತಾಯಾಂ ಪ್ರತಿಭಾತಿ । ಜಂಗಮಮೂರ್ತೀನಾಂ ಶಿವಮೂರ್ತ್ಯಭೇದಪ್ರತಿಪತ್ತಿಂ, ಸ್ವೇಷ್ಟಲಿಂಗಾಪೇಕ್ಷಯಾ ಜಂಗಮಪ್ರಾಬಲ್ಯಂ ಚ ವರ್ಣಿತಂ । ನಂದಿಕೇಶ್ವರಾದಿ ಶಿವಗಣ ಭಜನಸ್ಯಾಗಮಾಂತರೇಷು ಬಹುಶಃ ಪ್ರತಿಪಾದನಾಚ್ಚ ದ್ವಾರಪಾಲಾರ್ಚನಂ ಯದ್ಯದುಕ್ತಂ ತತ್ಸರ್ವಂ ಕಾರ್ಯಮಿತಿ ಸಿದ್ಧಾಂತಃ"

—ಕ್ರಿಯಾಸಾರ ಭಾ. ii ಉ. ೧೪ ಪು. ೨೨೧

ಎಂಬಲ್ಲಿ ಹೀಗೆ ನಿರ್ಣಯಿಸಲಾಗಿದೆ. "ನಂದಿಕೇಶ್ವರಾದಿ ದ್ವಾರಪಾಲಕರು ಶಿವವಿಭೂತಿ ವಿಶೇಷ. 'ಒಬ್ಬನೇ ಅನೇಕವಾಗಿರುವನು' ಎಂಬ ಶ್ರುತಿ ವಚನದಂತೆ ಶಿವ ಮತ್ತು ಅವನ ಅಂಶಾವತಾರ ವಿಶೇಷಗಳನ್ನು ವೀರಶೈವವೂ ಒಪ್ಪುತ್ತದೆ. ಇದರಿಂದ ನಂದ್ಯಾದಿಗಳು ಶಿವೇತರವಲ್ಲ. ಪ್ರಕೃತ ದ್ವಾರಪಾಲಕರು ಶಿವಾಜ್ಞೆಯ ಪರಿಪಾಲಕರು. ಆದ್ದರಿಂದ ಅವರಲ್ಲಿಯೂ ಶಿವಾಭೇದ ಬುದ್ಧಿ ಇರಬೇಕು. ಈ ಬಗ್ಗೆ ಬೇರೆ ಆಗಮಗಳ ಸಮ್ಮತಿಯೂ ಉಂಟು. ಜಂಗಮಮೂರ್ತಿಗಳು ಶಿವಮೂರ್ತಿಗಿಂತ ಬೇರೆ ಅಲ್ಲ. ಆದರೆ ಅವು ತನ್ನ ಇಷ್ಟಲಿಂಗಕ್ಕಿಂತಲೂ ಅಧಿಕವೆಂದು ವರ್ಣಿಸಲಾಗಿದೆ. ನಂದಿಕೇಶ್ವರಾದಿ ಶಿವಗಣ ಭಜನೆಯು ಎಲ್ಲ ಆಗಮಗಳಲ್ಲಿಯೂ ಹೇಳಿದೆ. ಆದ್ದರಿಂದ ಆಗಮೋಕ್ತ ನಂದ್ಯಾದಿದ್ವಾರಪಾಲಾರ್ಚನೆಯು ಮಾಡತಕ್ಕದ್ದು ಎಂಬುದೇ ಸಿದ್ಧಾಂತ." ಮೇಲಾಗಿ ಶಿವಪೂಜೆಯು ಆತ್ಮಾರ್ಥ ಮತ್ತು ಪರಾರ್ಥ ಎಂದು ಇಬ್ಬಗೆ.

ಆತ್ಮಾರ್ಥಂ ಚ ಪರಾರ್ಥಂ ಚ ಪೂಜಾ ಚೈವ ದ್ವಿಧೋಚ್ಯತೇ ।
ದತ್ತೇ ಚ ಗುರುಣಾ ಲಿಂಗೇ ಸ್ಥಂಡಿಲೇ ಸ್ವಯಮಾತ್ಮನಿ ॥

ಆತ್ಮಾರ್ಥಮಿದಮಾಖ್ಯಾತಂ ಪರಾರ್ಥಂ ಹಿ ತತಃ ಶೃಣು ।
ಗ್ರಾಮಾದೌ ಸ್ಥಾಪಿತೇ ಲಿಂಗೇ ಯದ್ವಾ ದೇವಾದಿ ನಿರ್ಮಿತೇ ॥
ಪರಾರ್ಥಮಿತಿ ವಿಜ್ಞೇಯಂ ಸರ್ವಪ್ರಾಣಿಹಿತಾವಹಂ ॥

—ಶಿವಜ್ಞಾನಪ್ರದೀಪಿಕಾ ಅ. ೬

"ಗುರುವಿನಿಂದ ಕೊಡಲ್ಪಟ್ಟ ಇಷ್ಟಲಿಂಗದಲ್ಲಿ ಅಥವಾ ಸ್ಥಂಡಿಲಾದಿಗಳಲ್ಲಿ ಪ್ರತಿಷ್ಠಿಸಿದ ಲಿಂಗಗಳಲ್ಲಿ ತನ್ನ ಶ್ರೇಯಸ್ಸಿಗಾಗಿ ಮಾಡುವ ಪೂಜೆ ಆತ್ಮಾರ್ಥ ಪೂಜೆ. ದೇವ, ಋಷಿಗಳಿಂದ ಅಥವಾ ಮಾನವರಿಂದ ಗ್ರಾಮ, ಗಿರಿ ಮೊದಲಾದ ಕಡೆ ಉದ್ಭವಿಸಿದ (ಸ್ವಯಂಭು) ಅಥವಾ ಆಗಮೋಕ್ತವಾಗಿ ಸ್ಥಾಪಿಸಿರುವ ಲಿಂಗಗಳನ್ನು ಭಕ್ತರ ಅಭೀಷ್ಟದಂತೆ ಎಲ್ಲ ಪ್ರಾಣಿಗಳ ಹಿತಕ್ಕಾಗಿ ಮಾಡುವ ಪೂಜೆ ಪರಾರ್ಥ.

ಹಿಂದೆಯೇ ಹೇಳಿದಂತೆ ವೀರಶೈವರು ಕೇವಲ ತಮ್ಮ ಉದ್ಧಾರಕ್ಕಾಗಿ ಆತ್ಮಾರ್ಥಪೂಜೆಯಲ್ಲಿಯೇ ನಿರತರಾಗುವವರಲ್ಲ. ಅವರು "ತೇ ವೀರಶೈವಾ ಲೋಕಾನಾಂ ನಿತ್ಯಂ ಕ್ಷೇಮಾಭಿಲಾಷಿಣಃ" ಎಂಬ ನೀಲಕಂಠ ಶಿವಾಚಾರ್ಯರ ಉಕ್ತಿಯಂತೆ "ಸಕಲ ಜೀವಾಳಿಗೆ ಲೇಸನೇ ಬಯಸುವವ"ರಾದುದರಿಂದ ಲೋಕಾಭ್ಯುದಯಕ್ಕಾಗಿ ಮೇಲೆ ಹೇಳಿದ ಸ್ಥಾವರ ಲಿಂಗಾರ್ಚನಾದಿಗಳನ್ನು ಸಹ "ಸತ್ಯಶುದ್ಧ ಕಾಯಕ"ವೆಂದು ಭಾವಿಸಿ ಮಾಡುವರು. ಇದೇ ಉದ್ದೇಶದಿಂದಲೇ ನೀಲಕಂಠ ಶಿವಾಚಾರ್ಯರು ಕ್ರಿಯಾಸಾರದ ೧೪ನೆಯ ಉಪದೇಶದಲ್ಲಿ ಆತ್ಮಾರ್ಥ ಪೂಜಾವಿಧಾನವನ್ನು ಮೊದಲು ವಿವರಿಸಿ ತರುವಾಯ ಸ್ಥಾವರಾರ್ಚನ ಪದ್ಧತಿಯನ್ನು ವಿಸ್ತಾರವಾಗಿ ಹೇಳಿದ್ದಾರೆ.

ಅಲ್ಲಿ ಆತ್ಮಾರ್ಥ ಪೂಜೆಯ ತರುವಾಯ ಪರಾರ್ಥ ಪೂಜಾವಿಧಾನವನ್ನು ಹೀಗೆ ಆರಂಭಿಸಿದ್ದಾರೆ.

ತತಃ ಪರಂ ಆಲಯ ಸಮೀಪಸ್ಥಃ ಪೂಜಾಂತೇ ಶಿವಾಲಯಂ ಗತ್ವಾ ತತ್ಸೇವಾಮಪಿ ಕುರ್ಯಾತ್ । ತತ್ರಾಯಂ ಕ್ರಮಃ—

ದೇವಾಲಯ ಸಮೀಪಂ ಗತ್ವಾ ಗೋಪುರದ್ವಾರ ಬಾಹ್ಯೇ ವಾ ಬಲಿಪೀಠಸ್ಯ ಬಾಹ್ಯೇ ವಾ ಸ್ಥೂಲಲಿಂಗಾತ್ಮಕಸ್ಯ ವಿಮಾನಸ್ಯ ನಮಸ್ಕಾರಂ ಕುರ್ಯಾತ್ । ತತೋ ಭದ್ರಲಿಂಗಸ್ಯ ಬಲಿಪೀಠಸ್ಯ ಧ್ವಜಸ್ತಂಭಸ್ಯಾಪಿ ನಮಸ್ಕಾರಂ ಕೃತ್ವಾ—

ಸಿಯೇ ಇರುವುವೆಂದು ಭಾವಿಸಿದರೂ ಸಹ "ಕೂಡಲಸಂಗಮ, ಶ್ರೀಶೈಲ, ಹಿಮತ್ಕೇದಾರ, ಮುಡುಕುತೊರೆ, ಪರಳಿ (ವೈದ್ಯನಾಥ) ಬನವಾಸಿ (ಮಧುಕೇಶ್ವರ) ಮುಂತಾದ ಕ್ಷೇತ್ರಗಳಲ್ಲಿರುವ ಸ್ಥಾವರಲಿಂಗಗಳು ಮತ್ತು ಎಡೆಯೂರು, ಮಲೆಯಮಾದೇಶ್ವರ, ಸಿದ್ಧಗಂಗಾ ಮುಂತಾದ ದಿವ್ಯಕ್ಷೇತ್ರಗಳಲ್ಲಿ ಜಗತ್ಪ್ರಸಿದ್ಧವಾಗಿರುವ ಶಿವಯೋಗಿ ಮತ್ತು ಶಿವಾಚಾರ್ಯರುಗಳ ಪೂಜೋತ್ತವಾದಿ ಕೈಂಕರ್ಯಗಳು ಇಂದಿಗೂ ನಡೆದುಬರುತ್ತಿರುವುದು ಸರ್ವರ ಅನುಭವದಲ್ಲಿಯೇ ಇದೆ.

ವೀರಶೈವಾಚಾರ್ಯರ ಅವತಾರಕ್ಷೇತ್ರಗಳೆನಿಸಿರುವ **ವಾರಾಣಸಿ, ದ್ರಾಕ್ಷಾರಾಮ, ಶ್ರೀಶೈಲ, ಕೊಲ್ಲಿಪಾಕಿ, ವಟಕ್ಷೇತ್ರ**ಗಳಲ್ಲಿ ವಿರಾಜಿಸುವ ಆಗಮೋಕ್ತವಾದ **ವಿಶ್ವೇಶ್ವರ, ಭೀಮೇಶ್ವರ, ಮಲ್ಲಿಕಾರ್ಜುನ, ಸೋಮನಾಥ** ಮತ್ತು **ಸಿದ್ಧೇಶ್ವರ**ಲಿಂಗಗಳು ವೀರಶೈವರಿಗೆ ಪೂಜ್ಯವೇ ಆಗಿವೆ.

ವೀರಶೈವ ಕನ್ನಡ ಕವಿಗಳಲ್ಲಿ ಅಗ್ರಗಣ್ಯನಾದ ಹರಿಹರ ಮಹಾಕವಿಯು ಹಂಪೆಯ ವಿರೂಪಾಕ್ಷಸ್ವಾಮಿಯ ಸಾಕ್ಷಾತ್ಪುತ್ರನೆಂದು ಹೇಳಿಕೊಂಡಿರುವುದು ಮಾತ್ರವಲ್ಲದೆ ಪಂಪಾ ವಿರೂಪಾಕ್ಷನ ಅಂಕಿತದಲ್ಲಿ ಅನೇಕ ಸ್ತೋತ್ರಗಳನ್ನು ಬರೆದು ತನ್ನ ಅನನ್ಯ ಭಕ್ತಿಯನ್ನು ಸಮರ್ಪಿಸಿದ್ದಾನೆ.

ಆತನು ರಚಿಸಿದ "**ಬಸವರಾಜದೇವರ ರಗಳೆ**"ಯಲ್ಲಿ ಬಸವಣ್ಣನು "ನಂದಿಯ ಮುಖದಿಂದೊಗೆತಪ್ಪ ದಿವ್ಯಲಿಂಗಮಂ" ತನ್ನ ಕರಸ್ಥಳಕ್ಕೆ ಬಿಜಯಂಗೈಸಿಕೊಂಡು ಅದನ್ನೇ ತನ್ನ ಇಷ್ಟಲಿಂಗವಾಗಿ ಮಾಡಿಕೊಂಡನೆಂದೂ, ಪ್ರತಿದಿನವೂ ಅಗ್ಗವಣೆ ಹೂಪತ್ರಗಳನ್ನು ತಂದು ಸಂಗಮೇಶ್ವರನನ್ನು ಪೂಜಿಸಿ ತತ್ಪ್ರಸಾದವನ್ನು ಸೇವಿಸುತ್ತಿದ್ದನೆಂದೂ ಹೇಳಿದೆ. ಈ ಮಾತನ್ನು ಎಲ್ಲ ಕವಿಗಳೂ ಹೇಳಿದ್ದಾರೆ.

ಬಸವ ಪುರಾಣವನ್ನು ಮೊಟ್ಟಮೊದಲು ಆಂಧ್ರ ಭಾಷೆಯಲ್ಲಿ ಉದ್ದಾಮ ದ್ವಿಪದ ಕಾವ್ಯವಾಗಿ ರಚಿಸಿದ ಪಾಲ್ಕುರಿಕೆ ಸೋಮನಾಥ ಕವಿಯ ವಂಶೀಯರು ಪಾಲ್ಕುರಿಕೆಯಲ್ಲಿರುವ **ಸೋಮನಾಥನ ಅರ್ಚಕ**ರಾಗಿದ್ದರೆಂದೂ, ಆ ಸ್ವಾಮಿಯ ಕೃಪೆಯಿಂದ ಹುಟ್ಟಿದ ಮಗನಿಗೆ ತಂದೆತಾಯಿಗಳು ಅದೇ ದೇವರ ಹೆಸರನ್ನೇ ಇಟ್ಟರೆಂದೂ ಆತನ ಜೀವನಚರಿತ್ರೆಯಿಂದ ವೇದ್ಯವಾಗುತ್ತದೆ.೧

---

೧ಪಾಲ್ಕುರಿಕಿ ಸೋಮನಾಥ ಕವಿ (ಪು. ೧೮) ವಿಮರ್ಶಾಗ್ರೇಸರ ಬಂಡಾರು ತಮ್ಮಯ್ಯ ವಿರಚಿತ.

ಇದಲ್ಲದೆ ಸಾಕ್ಷಾತ್ ಬಸವಣ್ಣನವರು ಬಾಗೇವಾಡಿಯ ಬಸವೇಶ್ವರನ ವರಪ್ರಸಾದದಿಂದಲೂ, ಮಹಾಮಹಿಮರೂ, ಪಂಡಿತಪ್ರಕಾಂಡರೂ ಆದ ಮಲ್ಲಿಕಾರ್ಜುನ ಪಂಡಿತಾರಾಧ್ಯರು ದ್ರಾಕ್ಷಾರಾಮ ಭೀಮೇಶ್ವರನ ಪ್ರಸಾದದಿಂದಲೂ ಅವತರಿಸಿದುದಲ್ಲದೆ ಇದೇ ಮಲ್ಲಿಕಾರ್ಜುನ ಪಂಡಿತಾರಾಧ್ಯರು ಶ್ರೀಶೈಲಕ್ಕೆ ಬಿಜಯಂಗೈದು ಪರ್ವತ ಮಲ್ಲಿಕಾರ್ಜುನನ ದರ್ಶನಮಾಡುವ ಶಕ್ತಿಯಿಲ್ಲದೆ ತಮ್ಮ ವೃದ್ಧಾಪ್ಯದಲ್ಲಿ ಶ್ರೀಶೈಲಕ್ಕೆ ಶಿಷ್ಯ ದೋನಮಯ್ಯನನ್ನು ಕಳುಹಿಸಿ, ಅಲ್ಲಿಯ ಸ್ವಾಮಿಯ ಮಹಿಮಾತಿಶಯಗಳನ್ನು ಆಲಿಸುತ್ತಿರುವಾಗಲೇ ಲಿಂಗೈಕ್ಯರಾದರೆಂದು ಪಾಲ್ಕುರಿಕೆ ಸೋಮನಾಥಕವಿ ಕೃತ "ಮಲ್ಲಿಕಾರ್ಜುನ ಪಂಡಿತಾರಾಧ್ಯ ಚರಿತ್ರೆ"ಯಲ್ಲಿ ವರ್ಣಿತವಾಗಿದೆ. ವೀರಶೈವ ಸಿದ್ಧಾಂತ ಪ್ರತಿಪಾದಕರೂ ಶಿವಾನುಭಾವಿಗಳೂ ಆಗಿದ್ದ ಮಗ್ಗೆ ಮಾಯಿದೇವ ಪ್ರಭುಗಳು ಐಪುರ ಸೋಮೇಶ್ವರನಲ್ಲಿಯೂ, ಕಲಿಯುಗ ಯಾಜ್ಞವಲ್ಕ್ಯರೆನಿಸಿದ್ದ ನಿಜಗುಣ ಶಿವಯೋಗಿಗಳು ಶಂಭುಲಿಂಗಸ್ವಾಮಿಯಲ್ಲಿಯೂ ತಳೆದಿದ್ದ ಭಕ್ತಿಭಾವಗಳು ವೀರಶೈವರಿಗೆ ಸ್ಥಾವರಲಿಂಗಗಳಲ್ಲಿರುವ ನಿಲವನ್ನು ಘೋಷಿಸುತ್ತದೆ.

ಕಡೆಯದಾಗಿ (೧೯೧೮-೩೩)ರ ಸುಮಾರಿನಲ್ಲಿ ಪರಳಿಯ ವೈದ್ಯನಾಥ ಮತ್ತು ಬನವಾಸಿ ಮಧುಕೇಶ್ವರ ದೇವಾಲಯಗಳ ಅರ್ಚನಾಧಿಕಾರಗಳ ಬಗ್ಗೆ ನ್ಯಾಯಸ್ಥಾನಗಳಲ್ಲಿ ನಡೆದ ವ್ಯವಹಾರ ಕಾಂಡಗಳಲ್ಲಿ ಭಾರತದ ವೀರಶೈವ ಗುರು-ವಿರಕ್ತವರ್ಗ, ಪಂಡಿತಮಂಡಲ ಹಾಗೂ ಮಹಾಜನಗಳು ಭಾಗ ವಹಿಸಿ ವಿಜಯಗಳಿಸಿದ ಪ್ರಸಂಗಗಳು ಸುಪ್ರಸಿದ್ಧವಾಗಿವೆ. ಕೇವಲ ಇಷ್ಟ ಲಿಂಗೈಕರತರಾದರೂ ವೀರಶೈವರು ಶಿವಭಕ್ತಿಯನ್ನು ಜಗತ್ತಿನಲ್ಲಿ ಹೆಚ್ಚಿಸಿ ಸಾಮಾನ್ಯ ಜನತೆಯನ್ನು ಇಷ್ಟಲಿಂಗೋಪಾಸನೆಯ ಕಡೆಗೆ ಒಲಿಯುವಂತೆ ಮಾಡುವ ಉದಾತ್ತ ಧ್ಯೇಯದಿಂದ ಶಿವಕ್ಷೇತ್ರಗಳ ಧರ್ಮಕರ್ತೃಗಳೂ ಆಗ ಮಿಕರೂ ಹಾಗೂ ಅರ್ಚಕರೂ ಆಗಿ ಪೂಜಾದಿಗಳನ್ನು ಲೋಕೋಪಕಾರ ಬುದ್ಧಿಯಿಂದ ನೆರವೇರಿಸುತ್ತಿರುವುದು ಸ್ವಾಭಾವಿಕವಾಗಿಯೇ ಇದೆ.
ಆದುದರಿಂದಲೇ ವೀರಶೈವರಿಗೆ ಶಿವಕ್ಷೇತ್ರಗಳು ಮತ್ತು ಶಿವತೀರ್ಥಗಳ ಅರ್ಚಕತ್ವಾದಿಗಳು ಅವಶ್ಯ ಕರ್ತವ್ಯಗಳಲ್ಲದಿದ್ದರೂ ನಿಷಿದ್ಧಗಳಲ್ಲ; ಅಷ್ಟೇ ಅಲ್ಲ—

ಶಿವಸ್ಥಾನಾನಿ ತೀರ್ಥಾನಿ ವಿಶಿಷ್ಟಾನಿ ಶಿವಾರ್ಚಕಃ ।
ಶಿವಯಾತ್ರೋತ್ಸವಂ ನಿತ್ಯಂ ಸೇವೇತ ಪರಯಾ ಮುದಾ ॥೪೭॥

ಶಿವಯಾತ್ರೋತ್ಸವ ಮಹಾಯಾತ್ರಾ ದರ್ಶನಕಾಂಕ್ಷಿಣಾಂ ।
ಮಾರ್ಗೇಽನ್ನಪಾನದಾನಂ ಚ ಕುರ್ಯಾನ್ಮಾಹೇಶ್ವರೋ ಜನಃ ॥೪೮॥
(ಸಿ. ಶಿಖಾಮಣಿ ಪರಿ. ೯)

ವೀರಶೈವನು ಶಿವಕ್ಷೇತ್ರಗಳು, ಶಿವತೀರ್ಥಗಳಲ್ಲಿಯೂ ಭಕ್ತಿಯನ್ನಿಟ್ಟು ಶಿವಯಾತ್ರೋತ್ಸವಾದಿಗಳನ್ನು ಪ್ರೇಮದಿಂದ ಮಾಡಬೇಕು. ಮೇಲಾಗಿ ವೀರ ಮಾಹೇಶ್ವರನು ಶಿವಕ್ಷೇತ್ರೋತ್ಸವಗಳಿಗೆ ಹೋಗಿಬರುವ ಭಕ್ತರಿಗಾಗಿ ಮಾರ್ಗ ದಲ್ಲಿ ಅನ್ನಪಾನಾದಿಗಳನ್ನು ಸಹ ಏರ್ಪಡಿಸಬೇಕು. ಎಂದು ವಿಧಿಸಲಾಗಿದೆ. ವೀರಶೈವರಿಗೆ ಉಕ್ತವಾಗಿರುವ ಪಂಚಾಚಾರಗಳಲ್ಲೊಂದಾದ 'ಗಣಾಚಾರ'ವು ಶಿವಕ್ಷೇತ್ರಗಳು ಮತ್ತು ಶಿವಧರ್ಮಗ್ರಂಥ ಹಾಗೂ ಸಂಸ್ಕೃತಿಗಳ ರಕ್ಷಣೆಗಾಗಿ "ವೀರಶೈವರು ಪ್ರಾಣಾರ್ಪಣ ಮಾಡಿಯಾದರೂ ದುಡಿಯಬೇಕು" ಎಂಬು ದನ್ನೇ ನಿಯಮಿಸಿರುವುದು ಸ್ಥಾವರ ಲಿಂಗಗಳ ಬಗ್ಗೆ ವೀರಶೈವದ ಕರ್ತವ್ಯ ವನ್ನು ಸಾರುತ್ತದೆ.

## ಆಗಮ ಸಾಂಕರ್ಯ

ಸಾಮಾನ್ಯವಾಗಿ ಶೈವಸಿದ್ಧಾಂತದಲ್ಲಿ ಆಯಾ ಆಗಮೋಕ್ತವಾಗಿ ಪ್ರತಿ ಷ್ಠಿಸಿದ ಶಿವಾಲಯಗಳಲ್ಲಿ ಆಯಾ ಆಗಮ ಸಂಪ್ರದಾಯದ ಅರ್ಚಕರು ಅದೇ ಆಗಮೋಕ್ತ ವಿಧಾನದಿಂದಲೇ ಅರ್ಚಿಸಬೇಕು. ಇಲ್ಲದಪಕ್ಷದಲ್ಲಿ ಆಗಮ ಸಾಂಕರ್ಯವೆಂಬ ದೋಷವುಂಟಾಗುತ್ತದೆ ಎಂಬ ಭಾವನೆಯಿದೆ. ಆದರೆ ಈ ಬಗ್ಗೆ ವೀರಶೈವಾಗಮದ ವೈಶಿಷ್ಟ್ಯವನ್ನು ಕುರಿತು ನೀಲಕಂಠ ಶಿವಾಚಾರ್ಯರು ಹೀಗೆ ಉತ್ತರಿಸಿದ್ದಾರೆ.

ದಿವ್ಯಾಗಮಾರ್ಥ ಸಾಂಕಾರ್ಯ ಮೈಕತಂತ್ರಾನ್ನ ದೋಷಕೃತ್ ।
ಕಿಂ ತು ಪಾಶುಪತಾದ್ಯರ್ಥ ಸಾಂಕರ್ಯಂ ತೇಷು ದೋಷಕೃತ್ ॥೬॥

ತ್ರಿಷ್ವಪ್ಯೇಕಂ ಸಮಾಶ್ರಿತ್ಯಗ್ರಾಹ್ಯ ಮನ್ಯದುಪೇಕ್ಷತೇ ।
ಇತ್ಯೇ ತನ್ಮಾನುಷೇ ಲಿಂಗೇ ನ ತು ಸ್ವಾಯಂಭುವಾದಿಷು ॥೭॥

ಏಕಾಗಮಾವಲಂಬೇಽಪಿ ಪ್ರವಿಹಾಯ ತದೀರಿತಂ ।
ಪ್ರಶಸ್ತಮನ್ಯತೋ ಗ್ರಾಹ್ಯ ಮಿತ್ಯನ್ವಾದಿಶದೀಶ್ವರಃ ॥೮॥

ಪ್ರಾಶಸ್ತ್ಯಸ್ಯೋಭಯೋಃ ಸಾಮ್ಯೇಽಪ್ಯರ್ಚನಾಂಗಮಪೇಕ್ಷಿತಮ್ ।
ತತ್ರೋಕ್ತಮನ್ಯತ್ರೋಕ್ತಂ ಚ ಸಮಮಿತ್ಯಪ್ಯಪಾದಿಶತ್ ॥೯॥

ತಸ್ಮಾದ್ದಿವ್ಯಾಗಮೇಭ್ಯೋಽಸಾವಖಿಲೇಭ್ಯಃ ಸಮುದ್ಧೃತೈಃ ।
ಅಪೇಕ್ಷಿತಾಂಶೈಃ ಕ್ರಿಯತೇ ಶ್ರೀ ಶಿವಾರ್ಚನಪದ್ಧತಿಃ ॥೧೦॥

—ಕ್ರಿಯಾಸಾರ ಭಾ. ii ಉ. ೧೪ ಪು. ೨೦೨

"ದಿವ್ಯಾಗಮಗಳಲ್ಲಿ ಬರುವ ಅರ್ಥಸಾಂಕರ್ಯವು ಒಂದೇ ತಂತ್ರಕ್ಕೆ ಸಂಬಂಧಿಸಿದ್ದಲ್ಲಿ ಅದು ದೋಷವಾಗದು. ಆದರೆ ಅಲ್ಲಿ ಪಾಶುಪತಾದಿ ಅರ್ಥಸಾಂಕರ್ಯವು ಮಾತ್ರ ದೋಷವೆನಿಸುತ್ತದೆ. ಈ ರೀತಿಯಾದ ಸಾಂಕರ್ಯವೂ ಸಹ ಮಾನುಷ ಲಿಂಗಗಳಿಗೆ ಮಾತ್ರ ಅನ್ವಯಿಸುವುದೇ ಹೊರತು ಅದು ಸ್ವಾಯಂಭುವ ಲಿಂಗಗಳಿಗಲ್ಲ. ಮಾನುಷ ಲಿಂಗಾರ್ಚನದಲ್ಲಿಯೂ ಕೂಡ ಯಾವುದಾದರೊಂದು ಆಗಮವನ್ನು ಅವಲಂಬಿಸಿದ್ದರೂ ಸಹ ಪ್ರಶಸ್ತವಾದ ಅಂಶವನ್ನು ಮತ್ತೊಂದು ಆಗಮದಿಂದ ಗ್ರಹಿಸಬಹುದು. ಅವೆಲ್ಲವೂ ಶಿವೋದಿತಗಳೇ ಆದುದರಿಂದ ಸಮಪ್ರಾಮಾಣ್ಯಗಳೇ. ಆದುದರಿಂದ ದಿವ್ಯಾಗಮಗಳೆನಿಸಿರುವ ಎಲ್ಲ ಆಗಮಗಳಿಂದಲೂ ಅಪೇಕ್ಷಿತವಾದ ಉತ್ತಮಾಂಶಗಳನ್ನು ಉದ್ಧರಿಸಿ ಶಿವಾರ್ಚನ ಪದ್ಧತಿಯನ್ನು ರಚಿಸಿದ್ದೇನೆ" ಎಂಬ ಮಾತು ವೀರಶೈವಾಗಮೋಕ್ತ ಪೂಜಾವಿಧಾನದ ಉದಾತ್ತತೆಯನ್ನೇ ಸಾರುತ್ತದೆ. ವೇದಾಂತದಲ್ಲಿ ವೀರಶೈವವು ದ್ವೈತ ಮತ್ತು ಅದ್ವೈತಗಳಿಗೆ ಸಮನ್ವಯವನ್ನು ಸಾಧಿಸಿ "ದ್ವೈತಾದ್ವೈತ"ವನ್ನು ನಿರ್ಣಯಿಸಿರುವಂತೆಯೇ ಸಿದ್ಧಾಂತದಲ್ಲಿಯೂ ಸಹ ಸಿದ್ಧಾಂತಾಗಮವೆಂದು ಪ್ರಸಿದ್ಧವಾದ ೨೮ ಶಿವಾಗಮಗಳಿಗೂ ಪ್ರಾಶಸ್ತ್ಯವನ್ನು ನೀಡಿ ತನ್ನ ವಿವೇಚನೆಯನ್ನು ಘೋಷಿಸಿದೆ.

## ಆಗಮಪ್ರಯೋಗ ಮತ್ತು ವೀರಶೈವಸಂಪ್ರದಾಯ

ವೀರಶೈವಾಗಮ ಪ್ರಯೋಗ ವಿಧಾನದಲ್ಲಿನ ಕೆಲವು ವೈಶಿಷ್ಟ್ಯಗಳನು ಇಲ್ಲಿ ಸಂಕ್ಷೇಪವಾಗಿ ಉಲ್ಲೇಖಿಸುವುದು ಅಪ್ರಸ್ತುತವಾಗಲಾರದು. ಶೈವಾಗಮ ಪ್ರಯೋಗೋಕ್ತ ಸ್ವಸ್ತಿವಾಚನ, ಅಗ್ನಿಮುಖ ಮೊದಲಾದ ಕೆಲವು ಕ್ರಿಯೆಗಳು ಶೈವ-ವೀರಶೈವಾಗಮ ಪ್ರಯೋಗಗಳಿಗೆ ಸಾಧಾರಣವಾಗಿರುವುದು ಅನಿವಾರ್ಯ. ಏಕೆಂದರೆ ಎರಡೂ ಸಂಪ್ರದಾಯಗಳ ಮೂಲ ಶೈವಾಗಮಗಳೇ,

ಆದರೂ ಶೈವ-ವೀರಶೈವ ದೀಕ್ಷಾವಿಧಾನಗಳಿಂದ ವಿಭಕ್ತವಾದ ಎರಡೂ ಸಂಪ್ರದಾಯಗಳ ಆಗಮಿಕರು ಮತ್ತು ಅವರ ಆಚಾರ, ವಿಚಾರ, ಸಾಧನೆ ಹಾಗೂ ಅನುಷ್ಠಾನಾದಿಗಳಲ್ಲಿ ವೈವಿಧ್ಯವಿರುವುದರಿಂದ ಆಯಾ ಪ್ರಯೋಗಗಳಲ್ಲಿಯೂ ವೈಶಿಷ್ಟ್ಯವಿರುವುದು ಸ್ವಾಭಾವಿಕ. ಉದಾಹರಣೆಗಾಗಿ ಶೈವಾಗಮಿಕಾಚಾರ್ಯರು ಪ್ರತಿಷ್ಠಾದಿಗಳಲ್ಲಿ ಆಯಾ ದೇವತೆಗಳನ್ನು ಮತ್ತು ಪ್ರಧಾನಾಂಗ ವ್ಯೂಹದಲ್ಲಿನ ಕಲಶಗಳಲ್ಲಿ ಅಷ್ಟವಿದ್ವೇಶ್ವರಾದಿ ದೇವತಾಕಲೆಗಳನ್ನು ಸ್ಥಾಪಿಸಿ ಮುಂದೆ ಅದೇ ಕಲೆಗಳನ್ನು ಅಧಿವಾಸಾದಿಗಳಿಂದ ಸಂಸ್ಕರಿಸಿದ ಮೂರ್ತಿಗಳಲ್ಲಿ ವಿನ್ಯಾಸಮಾಡುತ್ತಾರೆ. ಇಲ್ಲಿ ವೀರಶೈವ ಆಚಾರ್ಯ ಹಾಗೂ ಋತ್ವಿಜರೆನಿಸಿರುವ ವೀರಮಾಹೇಶ್ವರರು ಪಂಚಾಚಾರ್ಯ ಗೋತ್ರಸೂತ್ರಾದಿಗಳಿಗೆ ಸಂಬಂಧಿಸಿದವರಾದುದರಿಂದ ಅವರು ತಮ್ಮ ಗೋತ್ರ ಸೂತ್ರಗಳ ಮೂಲವೆನಿಸಿರುವ ಆಯಾ ಆಚಾರ್ಯರ ಪ್ರವರಗಳನ್ನು ಅಧಿಕರಿಸಿ ಆಯಾ .ಕ್ರಮದಿಂದಲೇ ಪಂಚ ಕಲಶಾರಾಧನೆ, ನ್ಯಾಸ, ಮಂತ್ರ ಜಪಾದಿ ರಹಸ್ಯಗಳನ್ನು ಗುರುಮುಖದಿಂದ ಬಲ್ಲವರಾಗಿ ತಮ್ಮ ದೀಕ್ಷಾಕಾಲದಲ್ಲಿ ಷಡಧ್ವಶುದ್ಧಿಪೂರ್ವಕವಾಗಿ ಗುರುಮುಖದಿಂದ ಉಪದಿಷ್ಟ ಕ್ರಮದಿಂದಲೇ ಸಕಲೀಕರಣಾದಿಗಳನ್ನು ಮಾಡಿಕೊಂಡು ಮಂತ್ರಸ್ವರೂಪರಾಗುತ್ತಾರೆ. "ಇವರಿಗೆ ಶಿವದೀಕ್ಷಾಕಾಲದಲ್ಲಿ ಗುರುಕೃತಕರನ್ಯಾಸಾಂಗನ್ಯಾಸಪೂರ್ವಕ ಸಕಲೀಕರಣವೇ ಮುಖ್ಯ" ಎಂದು ನೀಲಕಂಠ ಶಿವಾಚಾರ್ಯರು ಸ್ಪಷ್ಟಪಡಿಸಿರುವುದನ್ನು ಇದೇ ಗ್ರಂಥ (ಪು. ೩೩-೩೪) ದಲ್ಲಿ ಸೂಚಿಸಲಾಗಿದೆ. ಆ ಕಾರಣವಾಗಿಯೇ ಪ್ರತಿಷ್ಠಾದಿ ಕಾರ್ಯಕಲಾಪಗಳಲ್ಲಿ ವೀರಶೈವಾಗಮಿಕಾಚಾರ್ಯನು ತನ್ನ ಸಂಪ್ರದಾಯಾನುಗುಣವಾಗಿ ಮಂತ್ರಸ್ವರೂಪನೆನಿಸಿ ಪರಮ ಶಿವಕಲೆಯನ್ನು ಮಂತ್ರಪೂರ್ವಕ ಸ್ವಸ್ವರೂಪವನ್ನಾಗಿ ಮಾಡಿಕೊಂಡು ಅದನ್ನೇ ಪ್ರಧಾನಕಲಶದಲ್ಲಿ ನೆಲೆಗೊಳಿಸುತ್ತಾನೆ. ಪ್ರಧಾನಾಂಗ ವ್ಯೂಹದಲ್ಲಿ ಆಹ್ವಾನಿಸುವ ಸ್ವಸಿದ್ಧಾಂತ ಪ್ರತಿಪಾದಿತವಾದ ಆಚಾರಾದಿ ಲಿಂಗಕಲೆಗಳಿಂದ ಅದು ಸುರಕ್ಷಿತವಾಗುತ್ತದೆ. ಅದನ್ನೇ ಮುಂದೆ ಆಚಾರ್ಯನು ಅಧಿವಾಸಾದಿಗಳಿಂದ ಶುದ್ಧವಾದ ಮೂರ್ತಿಯಲ್ಲಿ ನೆಲೆಗೊಳಿಸುತ್ತಾನೆ. ಅದಕ್ಕಾಗಿ ಉಕ್ತವಾಗಿರುವ ಜೀವನ್ಯಾಸ, ಕಳಾನ್ಯಾಸಾದಿಗಳಲ್ಲಿ ವೀರಶೈವಾಗಮವು ತನ್ನದೇ ಆದ ವೈಶಿಷ್ಟ್ಯವನ್ನು ತಳೆದಿದೆ. ಈ ಭಾಗವು ಗೋಪ್ಯಾಂಶಗಳಲ್ಲಿ ಸೇರಿರುವುದರಿಂದ ಇದನ್ನು ತಜ್ಞ ಗುರುವಿನಿಂದಲೇ ಪಡೆಯತಕ್ಕದ್ದು. ಇನ್ನು

ಶೈವಾಗ್ನಿಮುಖ ವಿಭಾಗದಲ್ಲಿ ಕ್ರಿಯಾಸಾರೋಕ್ತವಾದ ವೀರಶೈವಾಗ್ನಿಮುಖ (ಪು. ೨೧೭) ವೈಶಿಷ್ಟ್ಯವು ಚೆನ್ನಾಗಿ ವ್ಯಕ್ತವಾಗಿದೆ.

## ವೀರಶೈವಾಗಮ ಪ್ರಯೋಗರತ್ನಂ

ವೀರಶೈವಾಗಮ ಪ್ರಯೋಗರತ್ನದಲ್ಲಿ ಉಕ್ತವಾಗಿರುವ ಪ್ರತಿಷ್ಠಾ ಮತ್ತು ಮಹೋತ್ಸವಾದಿ ವಿಧಿಗಳು ವೀರಶೈವಾಗಮಿಕರಲ್ಲಿ ಹಿಂದಿನಿಂದಲೂ ಬಳಕೆಯಲ್ಲಿವೆ. ಬಹುತೇಕ ಇವುಗಳು ಕೈಬರಹದ ರೂಪದಲ್ಲಿದ್ದುದೇ ಹೆಚ್ಚು. ಅಂಥವುಗಳನ್ನು ಸಂಗ್ರಹಿಸಿ ಅವುಗಳಿಗೆ ಗೊತ್ತಾದ ಸ್ವರೂಪವನ್ನು ಕೊಡುವ ವಿಷಯದಲ್ಲಿ ನನ್ನ ವಿದ್ಯಾರ್ಥಿದೆಶೆಯಿಂದಲೂ ಇದ್ದ ಆಸಕ್ತಿ ಇಂದು ವ್ಯಕ್ತರೂಪು ತಳೆದಿದೆಯೆಂದು ಬಿನ್ನೈಸಬೇಕಾಗಿದೆ. ಈ ಬಗ್ಗೆ ನನಗೆ ಕೈಬರಹದ ಪ್ರತಿಗಳನ್ನು ನೀಡಿದ ಹಾಗೂ ಅಮೂಲ್ಯ ಸಲಹೆಗಳನ್ನು ಕೊಟ್ಟ ವಿದ್ವದ್ವರ್ಗವನ್ನು ನೆನೆವುದು ನನ್ನ ಆದ್ಯ ಕರ್ತವ್ಯ.

**ಪ್ರತಿಷ್ಠಾಪ್ರಕರಣ**—ಭಕ್ತರ ಅಭಿರುಚಿಗೆ ಅನುಗುಣವಾಗಿ ಇಲ್ಲಿ ಉಕ್ತವಾಗಿರುವ **ಶಿವಲಿಂಗ, ದೇವೀ, ವಿನಾಯಕ, ಸ್ಕಂದ, ವೀರಭದ್ರ, ವೃಷಭ** ಮೊದಲಾದ ಪ್ರತಿಷ್ಠಾಕ್ರಮಗಳು ಆಯಾ ದೇವತೋಪಾಸನಾಭಿರುಚಿಯುಳ್ಳ ಜನಸಾಮಾನ್ಯರ ಉಪಯೋಗಾರ್ಥವಾಗಿಯೇ ನಿಬದ್ಧವಾಗಿವೆ.

ಸರ್ವಜನೋಪಯೋಗಕ್ಕಾಗಿ ಮಾನವನು ಕೆರೆ, ಭಾವಿ ಮತ್ತು ವನ (ತೋಪು) ಮುಂತಾದುವನ್ನು ನಿರ್ಮಿಸಿ ಪುಣ್ಯಭಾಗಿಯಾಗಬೇಕೆಂಬ ಭಾರತೀಯ ಸಂಸ್ಕೃತಿಯ ಹೆಚ್ಚಳವನ್ನೇ ಭಾರತ ಸರ್ಕಾರವು "**ವನಮಹೋತ್ಸವ**" ಮುಂತಾದವುಗಳ ಮೂಲಕ ಘೋಷಿಸುತ್ತಿದೆ. ಈ ತತ್ತ್ವಗಳ ಮೂಲ ಆಗಮಗಳೇ ಆಗಿವೆ. ಲೋಕೋಪಕಾರಕವಾದ ಅಂಥ ಸತ್ಕಾರ್ಯಗಳನ್ನು ಸಹ ಕಲ್ಪೋಕ್ತ ಕ್ರಮದಿಂದಲೇ ನೆರವೇರಿಸಬೇಕೆಂಬ ಉದ್ದೇಶದಿಂದ ಇಲ್ಲಿ **ತಟಾಕ, ಕೂಪ** ಮತ್ತು **ವನಪ್ರತಿಷ್ಠಾ**ಕ್ರಮಗಳನ್ನು ನಿರೂಪಿಸಲಾಗಿದೆ.

**ಮಹೋತ್ಸವಪ್ರಕರಣ**—"ಉತ್ಸವಪ್ರಿಯಾ ಹಿ ದೇವಾಃ" ದೇವತೆಗಳು ಉತ್ಸವಪ್ರಿಯರು. ಆದ್ದರಿಂದಲೇ ದೇವತೋತ್ಸವಗಳು ಏರ್ಪಟ್ಟಿವೆ. ಅಷ್ಟುಮಾತ್ರವಲ್ಲದೆ "ತುಷ್ಟೋ ದೇವಃ ಇಷ್ಟಂ ದದಾತಿ, ರುಷ್ಟೋ ದೇವಃ ಅನಿಷ್ಟಂ ದದಾತಿ" ಎಂಬ ಆರ್ಯೋಕ್ತಿಯನ್ನು ಅನುಸರಿಸಿಯೇ ವೇದಕಾಲ

**ಪುಣ್ಯಾಹ**—ಪರಮೇಷ್ಠೀ ಪುಕಾರಸ್ಯ ಣಸ್ಯ ನಾರಾಯಣಸ್ತಥಾ ।
ಹಕಾರಂ ಹರದೈವತ್ಯಂ ಪುಣ್ಯಾಹಾಕ್ಷರಕತ್ರಯಂ ॥
ಕರ್ಮಾರಂಭೇ ತು ತತ್ಪೂರ್ವೇ ಕಾರಯೇತ್ಸವ ಕರ್ಮಣಿ ।
ಪುಣ್ಯಾಹಂ ಚಾಹಯಾ ಪ್ರಾಹ ತಸ್ಮಾತ್ ಪುಣ್ಯಾಹವಾಚನಂ॥

**ಪೂಜಾ— ಸಾಧನವು** ಸುಗಂಧ ಕುಸುಮಂ ವಾಪಿ ದ್ರೋಣಪುಷ್ಪಮಥಾಪಿವಾ ।
ತಿಲಾಕ್ಷತೈರ್ಬಿಲ್ವದಳೈರರ್ಚಯೇದ್ದೇಶಿಕೋತ್ತಮಃ ॥

**ಅಂತರ್ಯ— ಜನಂ** ಅಹಿಂಸಾ ಪ್ರಥಮಂ ಪುಷ್ಪಂ ಕ್ಷಮಾಪುಷ್ಪಂ ದ್ವಿತೀಯಕಂ ।
ತೃತೀಯಂ ತು ದಯಾಪುಷ್ಪಂ ಚತುರ್ಥಂ ಕ್ರೋಧವರ್ಜನಂ॥
ಪಂಚಮಂ ಜ್ಞಾನಪುಷ್ಪಂ ತು ಷಷ್ಠಂ ವೈ ಭಾವಪುಷ್ಪಕಂ ।
ಸಪ್ತಮಂ ಧ್ಯಾನಪುಷ್ಪಂ ಚ ಸಮಾಧಿಶ್ಚಾಷ್ಟಮಂ ಭವೇತ್॥

**ಸ್ವಾತ್ವಿಕ**—ಪದ್ಮಂ ಚ ಕರವೀರಂ ಚ ಉತ್ಪಲಂ ನಂದಿವರ್ಧನಂ ।
ಸುಗಂಧದ್ರೋಣಪುಷ್ಪಾದಿ ಸತ್ವಂಚೈವ ಪಿತಾಮಹ ॥

**ರಾಜಸ**—ಮಲ್ಲಿಕಾ ಜಾಜಿ ಸೇವಂತಿ ಪುನ್ನಾಗಂ ಚಂಪಕಸ್ತಥಾ ।
ರಾಜಸಂ ಇಷ್ಟಕಾಮ್ಯಾರ್ಥ ತಮಮನ್ಯತ್ರ ಚೋಚ್ಯತೇ ॥

## ಶ್ರೇಷ್ಠ ಕುಸುಮ

ಅರ್ಕಪ್ರಸೂನಸ್ಯ ಸಹಸ್ರತೋಽಪಿ ತಥೈಕಂ ಕರವೀರಪುಷ್ಪಂ ।
ತತೋರ್ಕಪುಷ್ಪಾತ್ಕರವೀರಪುಷ್ಪಾದ್ಬಿಲ್ವಂದಳಂ ಚಂಪಕ ಪಂಚಕಂ ಚ ॥
ಧತ್ತೂರಪತ್ರೇಣ ಸಮಂ ಕುಶಂ ಚ ಶಮಿಾತ್ವಪಾಮಾರ್ಗಜಮುತ್ಪಲಂ ಚ ।
ನೀಲೋತ್ಪಲಂ ಶ್ರೇಷ್ಠತಮಂ ಪ್ರಸೂನಂ ಭೂಮೌನಗಾಗ್ರೇಷು ನಭೋಂ
ತರಾಲೇ ॥

—ಕ್ರಿಯಾಸಾರ ಉ. ೧೪

**ಬಿಲ್ವ**—ಬಿಲ್ವಪತ್ರಪ್ರದಾನಂ ಹಿ ಶೃಣುಷ್ವೈವ ವರಾನನೇ ।
ಯತ್ನೇನೈವ ಪ್ರದಾತವ್ಯಂ ಸರ್ವದಾ ತದಧೋಮುಖಂ ॥
ಮಮಾಸನಂ ಬಿಲ್ವಪತ್ರಂ ಮಾ ಕುರ್ವೀತ ಕದಾಚನ ।
ಮೋಹಾತ್ಪ್ರಕುರುತೇ ಯೋಽಪಿ ಮದ್ರೋಹೀ ಸ ನ ಸಂಶಯಃ ॥

—ಶಿವಲಿಂಗಾರ್ಚನ ತಂತ್ರೇ ೬

ಪುಷ್ಪಧಾರಣ—ಚಿಸ್ಮೃಪ್ರಯಾ ಚ ಪುಷ್ಪಾಣಿ ಶಿವಾಯಾಥ ಸಮರ್ಪಯೇತ್।
ಪುಷ್ಪಮೂರ್ಧ್ವಮುಖಂ ಯೋಜ್ಯಂ ಪತ್ರಂ ಯೋಜ್ಯಂ
ತ್ವಧೋಮುಖಂ ॥

ಪುಷ್ಪಾಂಜಲಿ—ಮಧ್ಯಮಾನಾಮಿಕಾಮಧ್ಯೇ ಪುಷ್ಪಂ ಸಂಗೃಹ್ಯ ಪೂಜಕಃ ।
ದೇವದೇವಸ್ಯ ಶಿರಸಿ ಪುಷ್ಪಮೇಕಂ ವಿನಿಕ್ಷಿಪೇತ್ ।
ಅಂಗುಷ್ಠೇನ ವಿನಾ ಕರ್ಮ ಕೃತಂ ತದ್ವಿಫಲಂ ಭವೇತ್ ॥
—ವೀ. ಆಚಾರಪ್ರದೀಪಿಕೆ ಅ. ೧೯

## ನಿರ್ಮಾಲ್ಯವಿಸರ್ಜನ

ಅಂಗುಷ್ಠ ತರ್ಜನ್ಯಗ್ರಾಭ್ಯಾಂ ನಿರ್ಮಾಲ್ಯಮಪನೋದಯೇತ್ ।
ವಿಸರ್ಜನಸ್ಯ ಸಮಯೇ ನವಪುಷ್ಪಂ ವಿನಿಕ್ಷಿಪೇತ್ ॥

ನ ಶೂನ್ಯಮಸ್ತಕಂ ಲಿಂಗಂ ಸುಧೀಃ ಕುರ್ಯಾತ್ಕದಾಚನ ॥

ಪ್ರದೋಷ—ಘೃತದೀಪಂ ಸುಗಂಧಂ ಚ ದ್ರೋಣಪುಷ್ಪಪಯೋದನಂ ।
ಪೂಜಾ ಅರ್ಪಿತಂ ದರ್ಶನಾತ್ಪುಣ್ಯಂ ಪ್ರದೋಷೇ ಗಿರಿಜಾಪತೇಃ ॥

ಮೂರ್ತಿ—ಕರ್ಮಾರಂಭೇ ಪೂಜಯೇತ್ತು ಶಿವಸೇವಾರ್ಥಮಾಗತಃ ।
ಸ್ಥಾಪನಂ ಮುಖಮಂಟಪಕುಡ್ಯಸ್ಥಂ ನೃತ್ತರೂಪಂ ಗಣಾಧಿಪಂ ॥
ಸರ್ವವಿಘ್ನಧ್ವಂಸನಾರ್ಥಮಾದೌ ವಿಘ್ನೇಶ್ವರಾರ್ಚನಂ ।
ಶಿವಸೇವಾರ್ಚನಾತ್ಪೂರ್ವಂ ಕಾರಯೇದ್ಗಣನಾಯಕಂ ॥

ದಕ್ಷಿಣೇ ದಕ್ಷಿಣಾಮೂರ್ತಿಂ ಸ್ಥಾಪಯೇದ್ದೇಶಿಕೋತ್ತಮಃ ।
ಭಕ್ತಾನಾಮಿಷ್ಟ ಕಾಮ್ಯಾರ್ಥಂ ದಾನವಾನಾಂ ಭಯಾರ್ಥಕಂ ॥
ಪಶ್ಚಿಮೇ ಸ್ಥಾಪಯೇದ್ವಿಷ್ಣುಂ ನಾರಸಿಂಹಮಥಾಪಿ ವಾ ॥

ವೀರಾಗಮೇ—ಪುಲ್ಲಿಂಗೋದ್ಭವ ಕಾಲೇತು ಶಂಭೋರ್ವೈ ಶಾಪಕಾರಣಾತ್।
ಪ್ರತ್ಯೇಕಾಲಯಹೀನಂ ಚ ಕೃತಂ ವೈ ಶಂಭುನಾ ಪುರಾ ॥
ಶಿವಪ್ರೀತಿಕರಂ ಲಿಂಗಂ ನಿರ್ಮಾಲ್ಯ ಪ್ರೀತಿಕಾರಣಾತ್ ।
ದಕ್ಷಿಣಾಭಿಮುಖಂ ಚಂಡಂ ಮಾನುಷಸ್ಯಪದೇ ನ್ಯಸೇತ್ ॥

**ಸುಪ್ರಭೇದೇ**—ಗ್ರಹದೋಷ ನಿವೃತ್ಯರ್ಥಂ ಸರ್ವಸಂಕಟನಾಶಿನೀಂ ।
ತತ್ಪಾರ್ಶ್ವೇ ಚಾಪಿಕುಡ್ಯೇ ವಾ ದುರ್ಗಾದೇವೀಂ ಪ್ರಕಲ್ಪ
ಯೇತ್ ॥

**ದ್ವಾರಪಾಲಕೌ**-ಮಹಾಕಾಳಾಖ್ಯಕಶ್ಚೈವ ನಂದಿನಾಮಾsಸುರದ್ವಿಷೌ ।
ಮಂದರಾಚಲ ಪತ್‌ಸ್ಥಿತ್ವಾ ಭೂತೇಶ ವರಲಾಭತಃ ॥
ಸಾರೂಪ್ಯಂ ಪ್ರಾಪ್ಯತೇ ತತ್ರವರಂ ತದ್ವಾರಪಾಲಕೌ ॥

**ಪಾಕಶಾಲಾ**—ಪಾಕಾರ್ಥಂ ಕಾರಯೇದ್ಯಸ್ತು ಪಾಕಶಾಲಾಗ್ನಿಪಾರ್ಶ್ವಕೇ ।
ಅಗ್ನಿಮೂರ್ತಿಂ ಪ್ರತಿಷ್ಠಾಪ್ಯ ತದ್ಭಾಗೇ ತು ವಿಚಕ್ಷಣಃ ॥

**ವೀರೇಶ**—ಶತ್ರುದೋಷ ನಿವೃತ್ಯರ್ಥಂ ಭಕ್ತಾನಾಮಿಷ್ಟಸಿದ್ಧಿದಂ ।
ವೀರಭದ್ರಂ ಮಾತೃಗಣಾ ವಿಘ್ನೇಶಂ ಯಾಮ್ಯದೇಶಕೇ ॥

ನಿತ್ಯೋತ್ಸವಾದಿ ವೃದ್ಧ್ಯರ್ಥಂ ಸರ್ವಸಂಕಟನಾಶನಂ ।
ವಿಘ್ನೇಶಂ ನೈರ್‌ಋತೇ ಚೈಕಬೇರಂ ಕಲ್ಯಾಣಮಂಟಪೇ ॥

ಕಲ್ಯಾಣಮಂಟಪಂ ಚೈಕಬೇರಂ ವಿಘ್ನೇಶ ನೈರ್‌ಋತೌ ॥
ಪಶ್ಚಿಮೇ ಷಣ್ಮುಖಂ, ವಾಯವ್ಯೇ ಜ್ಯೇಷ್ಠಾಂ, ಉತ್ತರೇ ದೇವೀಂ.
ಪಶ್ಚಿಮೇ ಮನೋನ್ಮನೀಂ, ಉತ್ತರೇ ದುರ್ಗಾಂ, ಈಶಾನ್ಯೇ
ಭಾಸ್ಕರ-ಕ್ಷೇತ್ರಪಾಲೌ ನ್ಯಸೇತ್ ॥

**ಬಲಿಪೀಠ**—ಧ್ವಜಾಗ್ರೇ ಬಲಿಪೀಠಂ ತು ಪಂಚಹಸ್ತೋರ್ಧ್ವ ವಿಸ್ತೃತಮ್।
ದ್ವಿಹಸ್ತಂ ದ್ವಾದಶಾಂಗುಲ್ಯಂ ಮಧ್ಯೇ ಪದ್ಮಂ ವಿಲೇಖಯೇತ್॥
ದಿಙ್ನಾಗಕೂರ್ಮ ದಿಕ್ಪಾಲ ನಾಗಾಷ್ಟ ಪ್ರಥಮೇ ತಲೇ ।
ದ್ವಿತಲೇ ದೇವ ಗಂಧರ್ವ ಸ್ತ್ರಿತಲೇ ತು ಮರುದ್ಗಣಾನ್ ॥
ಚತುಸ್ಸ್ಥಲೇ ಚ ಪೈಶಾಚಾನ್ಸ್ಥಾಪಯೇತಪಂಚಮೇ ತಲೇ ।
ಯಕ್ಷರಾಕ್ಷಸ ಭೂತಾದೀ ಬಲಿಪೀಠಾಶ್ರಿತಾ ಬುಧಃ ॥

**ಬಲಿಪೀಠ**—ಮೂಲೇತು ಕ್ಷೇತ್ರಪಾಲಶ್ಚ ಮಧ್ಯೇ ಚೈವ ಗದಾಧರಃ ।
**ದೇವಾಃ** ಅಗ್ರೇತು ಕಾಳಿಕಾಪ್ರೋಕ್ತಾ ಬಲಿಪೀಠಾಧಿದೇವತಾಃ ॥

**ಪ್ರತಿಷ್ಠಾಫಲ**—ಸರ್ವಪಾಪ ಪ್ರಶಮನಂ ಸರ್ವರೋಗ ನಿವಾರಣಂ ।
ಪ್ರತಿಷ್ಠಯೈಕ ಲಿಂಗಸ್ಯ ಜೀವನ್ಮುಕ್ತಿರ್ನ ಸಂಶಯಃ ॥

**ಚಾಮರ**—ಮೃಗಕೇಶಸಿತಂ ದೀರ್ಘಂ ಪ್ರಾದೇಶಾಂತಚತುಷ್ಟಯಂ ।
ಹೇಮ ದುರ್ವರ್ಣ ಹಸ್ತಂ ಸ್ಯಾದ್ರವೀಂದೂಭಯಚಾಮರಂ ॥

**ಕುಂಭಾರತಿ**—ಪ್ರಸ್ಥದ್ವಯಂ ತು ಖಾದಿರ್ವಾ ಪೂರಿತಂ ತ್ರಾಮಸತ್ರಕಂ ।
ಕುಂಭಾರಾರ್ತಿಂ ತು ಯಃ ಕುರ್ಯಾದ್ದೀಪಂ ತಕ್ಕಂಠಮಧ್ಯತಃ ॥
ಕುಂಭಮೂಲೇ ಸ್ಥಿತೋ ಬ್ರಹ್ಮಾ ಕುಂಭಮಧ್ಯೇ ಜನಾರ್ದನಃ ।
ಕುಂಭಾಗ್ರೇ ರುದ್ರದೈವತ್ಯಂ ಕುಂಭಾರಾರ್ತೇರ್ಹಿದೇವತಾಃ ॥

**ಘಂಟಾ**—ಪಾತ್ರವತ್ಸಂಪುಟಂ ಕಾಂಸ್ಯೈಃ ಸ್ಥೂಲಕಂಠಂ ಸುಶೋಭಿತಂ ।
ಶೂಲಂ ವಾ ವೃಷಭಂ ಶೃಂಗೇ ಘಂಟಾ ಶತಫಲಾಧಿಕಾ ॥
ಘಂಟಾಮೂಲೇ ಸ್ಥಿತಾ ಲೋಕಾಃ ಘಂಟಾಮಧ್ಯೇ ತು ನಿರ್ಜರಾಃ ।
ಘಂಟಾಗ್ರೇ ಸರ್ವತೀರ್ಥಾನಿ ಘಂಟಾನಾಳೇ ತು ಮಾರುತಾಃ ॥

**ದರ್ಪಣಂ**—ವಿತಸ್ತಿದ್ವಯಂ ಸಂಯುಕ್ತಂ ದೀಪ್ತಂ ಕಾಂಸ್ಯಂ ತು ದರ್ಪಣಂ ।
ನಾನಾ ವರ್ಣವಿಚಿತ್ರಾದಿ ಶೋಭಿತಂ ರವಿದೈವತಂ ॥

**ಛತ್ರಂ**—ಹಸ್ತಮಾತ್ರಂ ವರ್ತುಳಂ ಸ್ಯಾನ್ಮಧ್ಯೇ ವೃತ್ತಂ ದ್ವಿತಾಲಕಂ ।
ಹೇಮದುರ್ವರ್ಣ ಪಟ್ಟಾಭಂ ಛತ್ರಂ ಶಕ್ರೋऽಧಿದೇವತಾ ॥

**ಮುಖವಸ್ತ್ರಂ**—ಹೇಮಾಂಬರಂ ವಾ ಶ್ವೇತಂ ವಾ ಹ್ಯರತ್ನಿದ್ವಿತಯಂ ಸ್ಮೃತಂ ।
ಉಪಚಾರಾರ್ಥಮಿತ್ಯುಕ್ತಂ ಧೃತ್ವಾ ಉದ್ಧೃತ್ಯ ಪಾವಡಂ ॥

**ಪ್ರಚ್ಛನ್ನಪಟ**—ತಪ್ತಕ್ಷೀರಂ ಯಥಾ ಶಾಂತಂ ಜಲೈರ್ಭವತಿ ತತ್ತಥಾ ।
ವಸ್ತ್ರಪಾತೇ ಭುಜಂಗಾನಾಂ ಶಾಂತಂ ಪ್ರಚ್ಛನ್ನಕಂ ಪಟಂ ॥
ಬ್ರಹ್ಮಹತ್ಯಾದಿ ದುಷ್ಟಾನಾಂ ದೇವೇ ದೃಷ್ಟಿರ್ನ ಪಾತಯೇತ್ ।
ತದ್ದೋಷ ಶಮನಾರ್ಥಾಯ ಧೃತ್ವಾ ಪ್ರಚ್ಛನ್ನಕಂ ಪಟಂ ॥

**ಪಟಾಪಸರಣ**—ಘಂಟಾವರಣ ನಿರ್ಮುಕ್ತೌ ದೀಪ್ಯೈರೇವ ಪ್ರಕಾಶ್ಯತೇ ।
ಉದಯಾಚಲಭಾಸುರ್ವಾ ಹರೇತ್ ಪ್ರಚ್ಛನ್ನಕಂ ಪಟಂ ॥

**ಪೂಜಾವರ್ಜ್ಯ**–ನಾಕ್ಷತೈರರ್ಚಯೇದ್ವಿಷ್ಣುಂ ನ ತುಲಸ್ಯಾ ಗಣಾಧಿಪಂ ।
ನ ದೂರ್ವಯಾ ಯಜೇದ್ದುರ್ಗಾಂ ನ ಕೈತಕ್ಯಾ ಸದಾಶಿವಂ॥

**ಪೂಜಾಭಾವೇ**–ಆರ್ಷೇಯಾದಿ ಶಿವಸ್ಥಾನೇ ಪೌರುಷಾಖ್ಯೆ ಶಿವಾಲಯೇ ।
ಪೂಜಾಹೀನೇ ಭವೇದ್ರಾಷ್ಟ್ರಗ್ರಾಮನಾಶೋ ನ ಸಂಶಯಃ ॥

**ವರ್ಜ್ಯ**—ಏಕಹಸ್ತೇನ ಭಸಿತಂ ಪ್ರಸಾದಂ ಪಾದತೀರ್ಥಕಂ ।
ಏಕಂ ಸವ್ಯ ನಮಸ್ಕಾರಮೇಕಂ ಸರ್ವತ್ರವರ್ಜಯೇತ್ ॥

## ಉಚ್ಛಿಷ್ಟಗ್ರಾಹ್ಯತಾ

ಜಿಹ್ವೋಚ್ಛಿಷ್ಟಂ ತು ಯನ್ಮಂತ್ರಂ ಮತ್ಸ್ಯೋಚ್ಛಿಷ್ಟಂತು ಯಜ್ಜಲಂ।
ಭೃಂಗೋಚ್ಛಿಷ್ಟಂ ತು ಯತ್ಪುಷ್ಪಂ ಪೂಜಾಯೋಗ್ಯಂ ತು ಕೀದೃಶಂ ॥
ದೀಕ್ಷಯಾ ಶುದ್ಧ್ಯತೇ ಮಂತ್ರಃ ತೋಯಂ ಮಂತ್ರೇಣ ಶುದ್ಧ್ಯತೇ ।
ತೋಯೇನ ಪುಷ್ಪಶುದ್ಧಿಶ್ಚ ಶ್ರೂಯತಾಂ ಕಮಲೋದ್ಭವ ॥

**ಪ್ರತಿಮಾ**—ನಿಷ್ಕಂ ನಿಷ್ಕಾರ್ಧಕಂ ಪಾದನಿಷ್ಕಂ ವಾಪಿ ತದರ್ಧಕಂ ।
ಪ್ರತಿಮಾಃ ಕಾರಯೇ ತ್ತತ್ತದ್ದೇವಬೀಜೇನ ಯೋಜಯೇತ್ ॥

**ಅಂಗಾದಿಭಿನ್ನೇ**–ಪ್ರತ್ಯಂಗಂ ಭಿನ್ನಂ ನ ಭವೇತ್ ಉಪಾಂಗೇ ಶಿಲ್ಪಿನಾಕೃತಂ
ವಿಸರ್ಜನಂ ಚಾಂಗಭಿನ್ನಂ ಶಿವೇನೋಕ್ತಂ ಶಿವಾಗಮೇ ॥

**ಅರ್ಚಕ**—ರೂಪದ್ವಯಂ ಶಿವಸ್ಯೋಕ್ತಂ ಬಿಂಬಮರ್ಚಕ ಏವ ಹಿ ।
ಬಿಂಬೇತ್ವಾವಾಹನಾದೂರ್ಧ್ವಂ ಸದಾ ಸನ್ನಿಹಿತಃ ಶಿವಃ ॥
ಯಥಾ ಕಾಷ್ಟಗತೋ ವಹ್ನಿಃ ವೇದ್ಯತೇ ಮಥನಾದಿಭಿಃ ।
ತಥಾ ಮಂತ್ರಪ್ರಭಾವೇಣ ಭಕ್ತ್ಯಾಭಿವ್ಯಜ್ಯತೇ ಶಿವಃ ॥
ಅರ್ಚಕಸ್ಯ ಪ್ರಭಾವೇಣ ಶಿಲಾ ಭವತಿ ದೈವತಂ ।
ಅಮಂತ್ರಮರ್ಚಕಂ ದೃಷ್ಟ್ವಾ ಭಿತೋ ಭವತಿ ಶಂಕರಃ ॥
ಅಮಂತ್ರಾಬದ್ಧಯುಕ್ತಂ ಚೇದ್ರಾಜಾರಾಷ್ಟ್ರಂ ವಿನಶ್ಯತಿ ॥

## ಆದ್ಯೇಷ್ಟಕಾಸ್ಥಾಪನವಿಧಿ

ಆದ್ಯೇಷ್ಟಕಾಂ ಪುಂಶಿಲಯಾ ಸ್ತ್ರಿಯಾ ವಾ ದ್ವಾರಬಂಧನಂ ।
ನಪುಂಸಕೋಪಲೇನೈವ ತತೋ ಮೂರ್ಧ್ನೇಷ್ಟಕಾಂ ಕ್ಷಿಪೇತ್ ॥

ದೇವಾಲಯವನ್ನು ನಿರ್ಮಾಣಮಾಡಲು ಸ್ಥಳವನ್ನು ಗೊತ್ತುಮಾಡಿ ವಾಸ್ತುನ್ಯಾಸಪೂರ್ವಕ ಪದ ವಿಭಾಗವಾದನಂತರ ಪ್ರಾರಂಭ ಶಿಲೆಯನ್ನು ಇಡಬೇಕು. ತರುವಾಯ—

ಷೋಡಶಾಂಗುಲಮಾಯಾಮಾ ವಸ್ವಂಗುಲ ಸುವಿಸ್ತೃತಾ ।
ತಥಾ ಯುಗಾಂಗುಳಾ ಪ್ರೋಕ್ತಾ ತಟಸ್ಯೈಕಸ್ಯ ಕೀರ್ತಿತಾ ॥

ಸಪ್ತಾಂಗುಲ ವಿವೃದ್ಧ್ಯಾ ಶ್ಚ ತು ಅಷ್ಟತ್ರಿಂಶಾಂಗುಲೀ ತತಃ ।
ತದರ್ಧಂ ವಿಸ್ತೃತಂ ತಾಸಾಂ ತೀವ್ರಂ ತಸ್ಯಾರ್ಧಮುಚ್ಯತೇ ॥
ಏವಂ ಲಕ್ಷಣಸಂಪನ್ನಾಸ್ತಾಶ್ಶಿಲಾಃ ಪ್ರಥಮಾಃ ಸ್ಮೃತಾಃ ॥

**ಬುನಾದಿ**—(ಫೌಂಡೇಶನ್) ಮೊದಲ ಇಟ್ಟಿಗೆಯನ್ನೂ, ಅನಂತರ ಇಡಬೇಕಾದ

ತ್ರಯೋದಶಾಂಗುಲಾಯಾಮಂ ತದರ್ಧಾಂಗುಲ ವಿಸ್ತೃತಂ ।
ತೀವ್ರಂ ತಸ್ಯಾರ್ಧಮಿತ್ಯುಕ್ತಂ ಸ್ಥಾಪನೀಯೇಷ್ಟಕಾಃ ಕ್ರಮಾತ್॥

ಇತ್ಯಾದಿ ಲಕ್ಷಣಯುಕ್ತವಾದ ಬೇರೆ ಇಟ್ಟಿಗೆಗಳನ್ನೂ

ಆದ್ಯೇಷ್ಟಕ ದಿನಾತ್ಪೂರ್ವರಾತ್ರೌ ಚೈವಾಧಿವಾಸಯೇತ್ ॥

ಎಂದು ಹೇಳಿರುವುದರಿಂದ ಕಲಶಸ್ಥಾಪನಾ ಪೂರ್ವಕ ಅಧಿವಾಸಾದಿ ಕರ್ಮಗಳನ್ನೂ ಹೋಮಗಳನ್ನೂ ಯಥಾಶಾಸ್ತ್ರವಾಗಿ ಮಾಡಿ ಮರುದಿನ ಪ್ರಾತಃಕಾಲ ಸುಮುಹೂರ್ತದಲ್ಲಿ—

ಮಂದಿರೇ ಮಂಟಪೇ ಚೈವ ಪ್ರಾಸಾದೇ ಗೋಪುರೇ ತಥಾ ।
ಪರಿವಾರಾಲಯೇ ಚೈವ ವಿಧಿನೈತೇನ ವಿನ್ಯಸೇತ್ ॥

ಸುಮುಹೂರ್ತೇತು ಸಂಪ್ರಾಪ್ತೇ ದ್ವಾರಂ ನಿಶ್ಚಿತ್ಯ ಬುದ್ಧಿಮಾನ್।
ದ್ವಾರಸ್ಯ ದಕ್ಷಿಣೇ ಚಾಂಘ್ರಿಮೂಲೇ ಭಿತ್ಯಂತರಾಲಯೇ ॥
ಶಿಲಾಂ ವೈ ಚೇಷ್ಟಕಾಂ ವಾಪಿ ಸ್ಥಾಪಯೇತ್ಸಾಧಕೋತ್ತಮಃ ।
ಅನ್ಯೇಷ್ಟಕಾನ್ ಸಮಾದಾಯ ಭಿತ್ಯರ್ಥಂ ಮುನಿಪುಂಗವಾಃ ॥
ಈಶಾನಾದ್ಯೈಶ್ಚ ಮಂತ್ರೈಶ್ಚ ಕ್ಷಿಪೇದಿಂದ್ರಾದಿತಃ ಕ್ರಮಾತ್ ॥

ಇತ್ಯಾದಿ ಪ್ರಮಾಣದಂತೆ ದ್ವಾರದ ದಕ್ಷಿಣಾಂಘ್ರಿ ಭಿತ್ಯಂತರದಲ್ಲಿ ಪ್ರಥಮೇಷ್ಟಿಕೆ

ಯನ್ನೂ ಇಂದ್ರಾದಿ ದಿಕ್ಕುಗಳಲ್ಲಿ ಬೇರೆ ಇಟ್ಟಿಗೆಗಳನ್ನೂ ಇಡಬೇಕು.

—ಆದ್ಯೇಷ್ಟಕಾಪಟಲಃ

## ಮೂರ್ಧ್ನೇಷ್ಟಿಕಾಸ್ಥಾಪನವಿಧಿ

ಯತ್ಕಾಲೇ ಚ ಸಮಾಪ್ತಂ ಸ್ಯಾನ್ಮಹಾನ್ಯಾಸಾಂತಮಾಲಯಂ ।
ಮೂರ್ಧ್ನೇಷ್ಟಿಕಾಂ ಚ ತತ್ಕಾಲೇ ವಿನ್ಯಸೇದ್ವಿಧಿಪೂರ್ವಕಂ ॥
ನಪುಂಸಕೋಪಲೇನೈವ ಕಾರಯೇಲ್ಲಕ್ಷಣಾನ್ವಿತಂ ।
ದ್ವಾದಶಾಂಗುಲ ಮಾಯಾಮಂ ವಿಸ್ತಾರಂ ತು ಷಡಂಗುಲಂ ॥
ತ್ರ್ಯಂಗುಲಂ ರಸಮುಚ್ಛೇದಂ ಇಷ್ಟಿಕಾ ಶಿಲಮಾನಕಂ ॥

ಮುಂತಾದ ಲಕ್ಷಣಯುಕ್ತವಾದ ದೇವಾಲಯ ನಿರ್ಮಾಣಾಂತ್ಯದಲ್ಲಿ ಇಡಬೇಕಾದ ಮೂರ್ಧ್ನೇಷ್ಟಕೆಯನ್ನು ಶೈವಶಾಸ್ತ್ರೋಕ್ತವಾದ ರೀತಿಯಿಂದ ಪಂಚಗವ್ಯ ಅಧಿವಾಸಾದಿಪೂರ್ವಕ ಸಂಸ್ಕರಿಸಿ ಸುಮುಹೂರ್ತದಲ್ಲಿ

ವಿಧಿನಾ ಪೂಜಯಿತ್ವಾತು ಸುಮುಹೂರ್ತಂ ನಿರೀಕ್ಷಯೇತ್ ।
ಮಂಗಳಧ್ವನಿ ಸಂಯುಕ್ತಂ ವೇದಘೋಷ ಸಮನ್ವಿತಂ ॥
ಸುವರ್ಣರತ್ನೌಷಧೀಶ್ಚ ಬಿಲಮಧ್ಯೇ ವಿನಿಕ್ಷಿಪೇತ್ ।
ಇಷ್ಟಿಕಾಂ ಬಂಧಯೇತ್ಪಶ್ಚಾತ್ಸುಧಯಾ ಲೇಪನಂ ತತಃ ॥

ಎಂಬ ಪ್ರಮಾಣದಂತೆ ಕೊನೆಯಲ್ಲಿಡಬೇಕಾದ ಸುವರ್ಣ ರತ್ನೌಷಧಿ ಯುಕ್ತವಾದ ಮಹಾನ್ಯಾಸಾಂತ ರಚಿತವಾದ ಶಿಖರಾಗ್ರಭಾಗದಲ್ಲಿ ಮೂರ್ಧ್ನೇಷ್ಟಕೆಯನ್ನು ಸ್ಥಾಪಿಸಬೇಕು.

## ಧ್ವಜಪ್ರತಿಷ್ಠಾವಿಧಿ

ಸ್ಥಂಭಸ್ಥೌಲ್ಯಂ ನ ಕಥಿತಂ ದಾರುಸ್ಥೌಲ್ಯಂ ಶುಭಪ್ರದಂ ।
ಚಂಪಕಂ ದೇವದಾರುಂ ವಾ ಮಧೂಕಂ ವೇಣುರೇವ ಚ ॥
ಕ್ರಮುಕಂ ಚಂದನಂ ವಾಪಿ ಬದರೀಸಾಲಮೇವ ಚ ।
ಶ್ರೀಪರ್ಣಿಕಾದಿ ವೃಕ್ಷಾಶ್ಚ ಉತ್ತಮಂ ಪರಿಕೀರ್ತಿತಂ ॥

ಧ್ವಜಸ್ತಂಭ—ಫಲವೃಕ್ಷ ಸುಶಾಖಂ ಚ ಕೋಟರೈರ್ಬಿಂದುಭಿರ್ವಿನಾ ।
ಅತಿಪಕ್ವಮಪಕ್ವಂ ವಾ ಮೃದುಜಂಬೂಫಲಾಗ್ರವತ್ ॥

ಸ್ಥೂಲ್ಯಂತಂ ತತ್ರಿಭಾಗಂಸ್ಯಾನ್ನವಹಸ್ತೋನ್ನತಂ ಬುಧಃ ।
ಪಟ್ಟಿಕಾತ್ರಿತಯಂ ಚಾಗ್ರೇ ಹಸ್ತಮಾತ್ರಂ ತು ದೈರ್ಘಕಂ ॥
ತ್ರಿಕೋಣಾಕೃತಿಮಗ್ರೇಷು ಮಧ್ಯೇಮಧ್ಯೇ ವಿಚಿತ್ರಕೈಃ ।
ತ್ರಿಪಟ್ಟಿಕಾಗ್ರರಂಧ್ರೇಷು ಹಸ್ತಮಾತ್ರಂ ತು ವಿಸ್ತೃತಂ ॥
ಅಂಗುಲಿತ್ರಿತಯಸ್ಥೂಲಂ ಚಾಗ್ರೇ ಬಾಲಾಂಬುಜಂ ಯಥಾ ।
ಸ್ಥಂಭಮೂಲೇ ಸ್ಥಿತೋ ಬ್ರಹ್ಮಾಸ್ತಂಭಮಧ್ಯೇ ತು ಕೇಶವಃ ॥
ಸ್ತಂಭಾಗ್ರೇ ಖಂಡಪರಶುಃ ವೇದಿಕಾಗ್ರೇ ತು ನಿರ್ಜರಾಃ ॥

ಇವೇ ಮೊದಲಾದ ದಪ್ಪವಾದ ಮರವನ್ನು ದೇವಸ್ಥಾನದ ಧ್ವಜವೃಕ್ಷಕ್ಕೆ ಉಪಯೋಗಿಸಬೇಕು.

ಸ್ತಂಭಂ ಚತುರ್ಥಭಾಗಂ ತು ಕೃತ್ವಾ ಮೂರ್ತಿತ್ರಯಾತ್ಮಕಂ ।
ಮೂಲೇ ಭಾಗಂ ತು ಕುರ್ವೀತ ಚತುರಶ್ರಂ ಪಿತಾಮಹಂ ॥
ತತೋ ಭಾಗಧ್ವಯಂ ಚೈವ ಅಷ್ಟಾಶ್ರಂ ವಿಷ್ಣುರೂಪಕಂ ।
ರುದ್ರಾಂಶಂ ವರ್ತುಳಂ ಕುರ್ಯಾದ್ರುದ್ರಭಾಗಮುದೀರಿತಂ ॥
ಮೇಖಲಾಸ್ಥಾಪನಾರ್ಥಂ ತು ಊರ್ಧ್ವೇ ಹಸ್ತತ್ರಯಂ ಕ್ರಮಾತ್ ॥

ಇತ್ಯಾದಿ ಪ್ರಮಾಣಗಳಿಂದ ಧ್ವಜಸ್ತಂಭಪ್ರಮಾಣದ ನಾಲ್ಕನೇ ಒಂದನೇ ಭಾಗವನ್ನು ಚತುರಾಶ್ರವಾಗಿಯೂ ಎರಡು ಮೂರನೇ ಭಾಗವನ್ನು ಅಷ್ಟಾಶ್ರವಾಗಿಯೂ ನಾಲ್ಕನೇ ಭಾಗವನ್ನು ವರ್ತುಲವಾಗಿಯೂ ಮಾಡಿ ಅಗ್ರಭಾಗದಲ್ಲಿ ಮೂರುಹಸ್ತ ಪ್ರಮಾಣದಲ್ಲಿ ಮೂರು ಮೇಖಲೆಯನ್ನು ಸ್ಥಾಪಿಸಬೇಕು.

ಅಷ್ಟಾವಿಂಶಾಂಗುಲಂ ದೀರ್ಘಂ ಪ್ರಥಮಂ ಚತುರಶ್ರಕಂ ।
ದ್ವಿತೀಯಂ ತು ತಥಾ ಪ್ರೋಕ್ತಂ ತೃತೀಯೇ ಷೋಡಶಾಂಗುಲಿಂ ॥
ಮೇಖಲಾನಾಂ ತ್ರಯಾಣಾಂ ಚ ಪ್ರಮಾಣಂ ಪರಿಕೀರ್ತಿತಂ ॥

ಈ ಪ್ರಮಾಣವಂತೆ ಮೇಖಲೆಗಳನ್ನೂ

ಸೌವರ್ಣಂ ರಜತಂ ತಾಮ್ರಂ ಪೈತ್ತಳಂ ವಾ ತಥಾ ಭವೇತ್ ।
ಸ್ತಂಭೇ ತು ವೇಷ್ಟಿತಂ ಕೃತ್ವಾ ಮೂಲಾದಾಮಸ್ತಕಾಂತಕಂ ॥
ಘಂಟಾನಾಂ ದ್ವಾದಶಂ ಚೈವ ಕಾಂಸ್ಯೇ ರಸ್ಯೇನ ಕಾರಯೇತ್ ॥

ಸುವರ್ಣವೇ ಮೊದಲಾದ ತಗಡಿನಿಂದ ಧ್ವಜಸ್ತಂಭವನ್ನು ಮುಚ್ಚಿ ಪೂರ್ವೋಕ್ತವಾದ ಮೇಖಲೆಗಳಲ್ಲಿ ಕಂಚಿನ ಹನ್ನೆರಡು ಘಂಟೆಗಳನ್ನು ಪೋಣಿಸಿ ಧ್ವಜಸ್ತಂಭವನ್ನು ಸ್ಥಾಪಿಸಬೇಕು.

## ಧ್ವಜಸ್ತಂಭಪ್ರಮಾಣ

ಆಲಯಾದತಿದೀರ್ಘಂ ತು ಉತ್ತಮಂ ಪರಿಕೀರ್ತಿತಂ ।
ಮಧ್ಯಮಂ ಶಿಖರಾಯಾಮಂ ಗ್ರೀವಾಯಾಮಮಥಾಪಿ ವಾ ॥

ಕಾರಣೇ ಧ್ವಜ ಪ್ರತಿಷ್ಠಾ ಪಟಲಃ

ದೀಪಸ್ತಂಭ—ಭಾನುರ್ವಿಶ್ವ ತಿಥಿರ್ಹಸ್ತಂ ಸ್ಥಾಪ್ಯಂತಂ ಗೋಪುರೋನ್ನತಂ।
ಗೋಪುರಸ್ಯಾಪರಾಗ್ರೇ ತು ದೀಪಸ್ತಂಭಂ ಪ್ರಕಲ್ಪಯೇತ್ ॥
ದುರ್ಗಾಂ ಚ ಪೂರ್ವದಿಗ್ಭಾಗೇ ದಕ್ಷಿಣೇ ವೃಷಭಂ ಲಿಖೇತ್ ।
ಪಶ್ಚಿಮೇ ವೀರಭದ್ರಂ ವೈ ಚೋತ್ತರೇ ಕ್ಷೇತ್ರಪಾಲಕಂ ॥
ವೃತ್ತಸ್ಥೂಲಂ ಪದ್ಮಪೀಠಂ ಪ್ರುತ್ಯಶ್ರಂ ತ್ರಯಮಾನಕಂ ।
ಅಯೋ ದಂಡಂ ವಿನಿಕ್ಷಿಪ್ಯ ಸ್ತಂಭಸ್ಯೋರ್ಧ್ವೇತು ದೀಪಕಂ ॥
ದೀಪಸ್ತಂಭಸ್ಯಾಧಿದೇವೋ ಭಾಸ್ಕರಶ್ಚೇತಿ ಕೀರ್ತಿತಃ ॥

## ಹವನ

ಶೈವ ಮತ್ತು ವೀರಶೈವ ಪ್ರಯೋಗಗಳಲ್ಲಿ ಕೆಲವು ಕ್ರಿಯೆಗಳಲ್ಲಿ ಸಾಮ್ಯ ವುಂಟು. ಪ್ರಧಾನಕರ್ಮಾಂಗವಾಗಿ ಮಾಡುವ ವಾಸ್ತು ಮುಂತಾದ ಕಾರ್ಯ ಗಳಲ್ಲಿ ಹೋಮಗಳನ್ನು ಪ್ರತ್ಯೇಕ ಸ್ಥಂಡಿಲ (ವೇದಿಕೆ) ದಲ್ಲಾಗಲಿ ಅಥವಾ ಪ್ರಧಾನಕುಂಡಲ್ಲಾಗಲಿ ಮಾಡಬಹುದು. ಅಂಗಹೋಮಕ್ಕೆ ಪಾತ್ರ ಸಾಧನಾದಿ ಗಳನ್ನು ವೈದಿಕಾಗ್ನಿಮುಖ (ವೀ. ಪೂ. ರ. ಪು. ೯೩–೧೧೮) ದಂತೆ ಮಾಡಿ ಕೊಂಡು ಆಯಾ ಕರ್ಮಕ್ಕೆ ಸಂಬಂಧಿಸಿದ ಪ್ರಾಧಾನ ಆಹುತಿಗಳನ್ನು ಕೊಟ್ಟು ಪ್ರಾಯಶ್ಚಿತ್ತಾಂತ (ವೀ. ಪೂ. ರ. ಪು. ೧೮೯–೧೧೩) ವಾಗಿ ಮಾಡಿ ಹೋಮ ವನ್ನು ಸಮಾಪ್ತಿಗೊಳಿಸಬೇಕು. ಈ ಅಂಗಕರ್ಮಗಳಲ್ಲಿ ಜಯಾದಿ ಮತ್ತು ಪೂರ್ಣಾಹುತಿಗಳಿರುವುದಿಲ್ಲ.

## ಪ್ರಧಾನಾಗ್ನಿಮುಖ

ಪ್ರತಿಷ್ಠಾದಿ ಕಾರ್ಯಗಳಲ್ಲಿ ಮಾತ್ರ ಇದನ್ನು ಶೈವಾಗ್ನಿಮುಖದಂತೆ (ಪು. ೧೨೪-೧೨೬) ಮಾಡತಕ್ಕದ್ದು. ಮತ್ತು ವಿಧ್ಯುಕ್ತವಾಗಿ ರಚಿಸಿದ ಪ್ರಧಾನ ಕುಂಡದಲ್ಲಿ ಮಾಡುವುದೇ ಪ್ರಶಸ್ತ.

**ಮಂಟಪ**—ಐಂದ್ರೇ ವಾ ದಕ್ಷಿಣೇ ವಾಪಿ ಚೈಶಾನ್ಯೇ ಪಾವಕೇಪಿ ವಾ ।
ಪಶ್ಚಿಮೇ ಚೋತ್ತರೇ ವಾಪಿ ಕಲ್ಪಯೇದ್ಯಾಗಮಂಟಪಂ ॥
ಐಶಾನ್ಯೇ ನವಹಸ್ತಮಂಟಪಯುತೇ ಚೈಕಾದ್ಯಶೀತಿಃ೧ಪದೇ ।
ಮಧ್ಯೇ ಬ್ರಹ್ಮಪದೇಷು ವೇದಿ ಸಹಿತಂ ತದ್ಬಾಹ್ಯ ದೈವೀಪದೇ ॥
ಅಷ್ಟೌಮಂಗಳಕಂ ನ್ಯಸೇದ್ಬಹಿಪದೇ ಕುಂಡಾನಿ ಮಾನುಷ್ಯಕೇ।
ಪೈಶಾಚಾಖ್ಯಪದೇ ತು ಭಿತ್ತಿ ಕಲಶೌ ರಕ್ಷಾಂಶಕೇ೨ ತೋರಣಂ ॥

**ವೇದಿಕೆ**—ಹಸ್ತದ್ವಯ ಸುವಿಸ್ತಾರಾ ಪ್ರಾದೇಶದ್ವಯಮುನ್ನತಾ ।
ಮಧ್ಯೇ ಬ್ರಹ್ಮಪದೇ ಕುರ್ಯಾದ್ವಿತಸ್ತ್ಯಂತೋಪವೇದಿಕಾ ॥
ಮಧ್ಯೇ ತು ಶಿವಕುಂಭಂ ತು ತದ್ವಾಮೇ ವರ್ಧನೀಘಟಂ ।
ಪರಿತೋಽಷ್ಟ ಘಟಾಸ್ತತ್ರ ಪೂರ್ವಾದೀಶಾಂತಕಂಕ್ರಮಾತ್ ॥

**ಕುಂಡ**—ನವಸಂಖ್ಯಾನಿ ಕುಂಡಾನಿ ಪಂಚಕುಂಡಾದಿ ವಾ ಯದಾ ।
ಅಥವಾಪ್ಯೇಕ ಕುಂಡಂ ವಾ ಯಥಾ ವಿತ್ತಾನುಸಾರತಃ ॥
ವಿತ್ತಪ್ರಾಬಲ್ಯ ಯತ್ನಾರ್ಥಮನ್ಯೋನ್ಯ ಘಟನಾರ್ಥಕಂ ।
ವಿಭವಾರ್ಥಂ ಸಂಭ್ರಮಾರ್ಥಂ ನವಪಂಚಾಗ್ನಿ ಕುಂಡಕೈಃ ॥
ಧರ್ಮಾರ್ಥ ಕಾಮಮೋಕ್ಷಾರ್ಥಮೇಕಕುಂಡಂ ವಿಧೀಯತೇ ।

### ನವಕುಂಡ

ಪೂರ್ವೇತು ಚತುರಶ್ರಂ ಸ್ಯಾದಾಗ್ನೇಯ್ಯಾಂತು ಭಗಾಕೃತಿಃ ।
ಅರ್ಧಚಂದ್ರಂ ತು ಯಾಮ್ಯಾಯಾಂ ನೈಋತ್ಯಾಂ ತು ತ್ರಿಕೋಣಕಂ
ವಾರುಣೇ ವರ್ತುಳಂ ಕುಂಡಂ ಷಟ್ಕೋಣಂ ವಾಯುದೇಶಕೇ ।
ಉತ್ತರೇ ಪದ್ಮಕುಂಡಂ ತು ಚೈಶಾನ್ಯಾಮಷ್ಟಕೋಣಕಂ ॥

---

೧ ಏಕೋತ್ತರಾಶೀತಿರಿತ್ಯರ್ಥಃ. ೨ ರಾಕ್ಷಸಾಂಶ.

ಪುರಂದರೇಶಯೋರ್ಮಧ್ಯೇ ವೃತ್ತಕುಂಡಂ ಪ್ರಧಾನಕಂ ।
ನವಕುಂಡಂ ಶಿವಾಜ್ಞಾತಂ ಭುಕ್ತಿಮುಕ್ತಿಫಲಪ್ರದಂ ॥

**ಕುಂಡರಚನೆ**

ಚತುರಶ್ರಂ ಪುರಾಕೃತ್ವಾ ಚೇಂದ್ರಾದ್ಯಷ್ಟದಿಶಾಸು ವೈ ।
ಖಾತಾಂತಂ ತತ್ರವಿಸ್ತಾರಂ ಮಧ್ಯೇ ಕಂಠಂ ದ್ವಯಾಂಗುಲಂ ॥
ಗಜತುಂಡಾಕೃತಿರ್ನಾಭಿರೂರ್ಧ್ವೇ ಪಿಪ್ಪಲ ಪತ್ರವತ್ ॥

**ಸಮಿತ್**—ಅಶ್ವತ್ಥೋದುಂಬರೈರ್ವಾಪಿ ಸಮಿತ್ಪಾಲಾಶಮುತ್ತಮಂ ।
ಅರತ್ನಿಮಾತ್ರಃ ಪರಿಧಿರಿಧ್ಮಂ ಪ್ರಾದೇಶಮುನ್ನತಂ ॥

ಪ್ರಾದೇಶಮಾತ್ರಾಸ್ಸಮಿಧಃ ಪಂಚವಿಂಶತಿ ಸಂಖ್ಯಕಾಃ ।
ತಾಲಗದ್ವಯೋನ್ನತಂ ಚೇಧ್ಮಂ ಕಾರಯೇಚ್ಛಿರಮಂತ್ರತಃ ॥

**ಸ್ರುಕ್-ಸ್ರುವೌ**

ಲೋಹೈರ್ವೋದುಂಬರೈಃ ಕಾಷ್ಠೈಸ್ಸ್ರುಕ್‌ಸ್ರುವೌ ದರ್ವಿಸಾಧನಂ।
ಪಲಾಶಾಶ್ವತ್ಥಪರ್ಣೈರ್ವಾ ಕಾರಯೇದಗ್ನಿಮಂತ್ರತಃ ॥

**ಕುಶಾಃ**—ಸ್ತ್ರೀಪುನ್ನಪುಂಸಕಾಶ್ಚೇತಿ ಕುಶಭೇದಾಸ್ತ್ರಿಧಾ ಸ್ಮೃತಾಃ ।
ಮೃದುಶ್ಯಾಮಾ ಚ ಜಾಯೇತಿ ಜಾಯಾಕರ್ಮಸು ಯೋಜಯೇತ್ ॥

ಈಷತ್ಪಕ್ಷ ಸಮಾಯುಕ್ತಾಃ ಪುಂದರ್ಭಾಶ್ಚೇತಿ ಕೀರ್ತಿತಾಃ ।
ಪುಂಸ್ತ್ರಿಯಾಯಾಂ ತು ಪುಲ್ಲಿಂಗಾ ಯೋಜಯೇತ್ತು ಸುಧೀವರಃ ॥

ನಂಪುಂಸಕ ಕುಶಾಶ್ಚೇತಿ ಸ್ಮೃತಾಃ ಕೋಮಲವರ್ಜಿತಾಃ ।
ಹೋಮೇ ಜಪೇ ಚ ದಾನೇ ಚ ಸ್ವಾಧ್ಯಾಯೇ ಪಿತೃಕರ್ಮಣಿ ।
ಅಶೂನ್ಯೇನ ಕರೇಣೈವ ಸ್ವರ್ಣದುರ್ವರ್ಣಕೈಃ ಕುಶೈಃ ॥

ವಜ್ರಾಯುಧಂ ಸುರೇಂದ್ರಸ್ಯ ತ್ರಿಶೂಲಂ ತು ಪಿನಾಕಿನಃ ।
ವಿಷ್ಣೋಶ್ಚಕ್ರಾಯುಧಂ ಯದ್ವದ್ವಿಜಹಸ್ತೇ ಪವಿತ್ರಕಂ ॥

**ಪವಿತ್ರ**—ಚತುರಂಗುಲಮಗ್ರಂ ತು ಗ್ರಂಥಿರೇಕಾಂಗುಲೀ ಭವೇತ್ ।
ವಲಯಂ ದ್ವ್ಯಂಗುಲಂ ಪ್ರೋಕ್ತಂ ಪವಿತ್ರಸ್ಯ ಚ ಲಕ್ಷಣಂ ॥

---

೧ಮಧ್ಯಮಾಂಗುಷ್ಠ ಪ್ರಮಾಣಃ.

ಪಂಚಭಿಃ ಪೌಷ್ಟಿಕಂ ಕರ್ಮ ಚತುರ್ಭಿಶ್ಚಾಭಿಚಾರಕೇ ।
ತ್ರಿಭಿಃ ಪವಿತ್ರಂ ಪಿತ್ರ್ಯೇ ತು ದ್ವೌ ದರ್ಭೌ ನಿತ್ಯಕರ್ಮಸು ॥

**ಕೂರ್ಚ**—ದ್ವಾತ್ರಿಂಶದುತ್ತಮಂ ಕೂರ್ಚಂ ಮಧ್ಯಮಂ ಪಂಚವಿಂಶತಿಃ ।
ಇತರಂ ಚಾಧಮಂ ಪ್ರೋಕ್ತಂ ಕೂರ್ಚದರ್ಭಾಃ ಪ್ರಕೀರ್ತಿತಾಃ ॥

ಶಿವಕುಂಭೇಽಷ್ಟ ದರ್ಭೈಸ್ತು ವರ್ಧನ್ಯಾಂ ತು ಚತುಷ್ಟಯೈಃ ।
ತದರ್ಧಂ ಸರ್ವಕುಂಭೇಷು ಕೃತಂ ಕೂರ್ಚಂ ವರಂ ಸ್ಮೃತಂ ॥

ಅಗ್ರಂ ತು ಚತುರಂಗುಳ್ಯಂ ಗ್ರಂಥಿರೇಕಾಂಗುಲಂ ಭವೇತ್ ।
ಪ್ರಾದೇಶಮಾತ್ರಮಾಯಾಮಂ ಮರುತಶ್ಚಾಧಿದೈವತಂ ॥

**ಪರಿಸ್ತರಣ**—ಶಿರೋ ನಾಸಾಕ್ಷಿವಕ್ತ್ರಂ ತು ಜಿಹ್ವಾಶ್ರೋತ್ರಸಮುದ್ಭವಂ ।
ಅಗ್ನೇಶ್ಚ ಪೂರ್ವದಿಗ್ಭಾಗೇ ಪ್ರಸ್ತರೇ ಷೋಡಶೈಃ ಕುಶೈಃ ॥

ಅಂಗುಳೀ ಮಣಿಬಂಧೌ ಚ ಬಾಹೂಕಂಧರಕಂ ತಥಾ ।
ಜಂಘಾರ್ಥಮಿತಿದರ್ಭಾಸ್ಸ್ಯುಃ ಪಾರ್ಶ್ವಯೋರ್ದಶಸಪ್ತ ಚ ॥

ಹೃತ್ಕುಕ್ಷಿ ಪಾರ್ಶ್ವನಾಭಿಶ್ಚ ಕಟಿಗುಹ್ಯಗುದಾನಿ ಚ ।
ಪಾದಾಂಗುಳ್ಯಸ್ತು ವಾರುಣ್ಯೇ ದರ್ಭಾಶ್ಚಾಷ್ಟಾದಶ ಸ್ಮೃತಾ ॥

**ಹೋಮಾಜ್ಯ**—ಉತ್ತಮಂ ಗೋಘೃತಂ ಗೇಹೇ ಸುಗಂಧಂ ಚ ಶುಚಿಶ್ರೃತಂ ।
ಹೋಮಕಾರ್ಯೇ ವಿಶೇಷೇಣ ದೋಷದುರ್ಗಂಧವರ್ಜಿತಂ ॥

ಗುಂಜಾಮಾಷನಿಮಗ್ನಂ ತು ಬದರೀಫಲಮಾನತಃ ।
ಹೋಮಕರ್ಮಣಿ ಶಸ್ತಂ ಸ್ಯಾದಾಜ್ಯಮಾನಂ ಪ್ರಕೀರ್ತಿತಂ ।

**ಪಾತ್ರಾಸಾಧನ**

ಪಾತ್ರಾಣ್ಯಾಸಾದಯೇತ್ಸೌಮ್ಯೇ ಸಮಿಧೇಧ್ಮಾ ಚ ಬರ್ಹಿಷೀ[1] ।
ಪವಿತ್ರಸ್ಸ್ರುಕ್ಸ್ರುವಾದ್ಯಾಶ್ಚ ಸ್ಫ್ಯಂ[2] ಮೇಕ್ಷಣ[3] ಕೂರ್ಚಕೇ ॥

ದ್ರವ್ಯಸ್ಥಾಲ್ಯಾದ್ಯಷ್ಟಕಂ ಸ್ಯಾದ್ವಿಷ್ಟರಂ ಚಾರ್ಘ್ಯಪಾತ್ರಕಂ ।
ವಿಶ್ವಜಾನಿ ಕುಶಾಜ್ಯಂ ಚ ಗಂಧಪುಷ್ಪಾಕ್ಷತಂ ಚರುಃ ॥

---

೧ ಬರ್ಹಿರ್ದರ್ಭಸಮೂಹಕಂ. ೨ ಬಾಹುಮಾತ್ರಃ ಖಾದಿರಮಯಃ ಖಡ್ಗಾಕಾರ ಆಯುಧ ವಿಶೇಷಃ. ೩ ಕಿಂಶುಕೋದುಂಬರಾಶ್ವತ್ಥ ಸಮಿದ್ವಿಶೇಷಃ.

**ಉತ್ಸವ**—ನೃತ್ತಸಂಗ್ರಹಾದಿಕೇತ್ಸಸ್ತಂ ಸೃಷ್ಟ್ಯುತ್ಸವ ಇತೀರಿತಃ ।
ಸಿಂಹಯಾನಾದಿಕಂ ಸರ್ವಂ ಸ್ಥಿತ್ಯುತ್ಸವ ಇತಿ ಶ್ರುತಮ್ ॥

ನೃತ್ತೋತ್ಸವಸ್ತು ಸಂಹಾರಃ ಗೌರೀ ಯಾಗ ಸ್ತಿರೋಧನಮ್।
ಅನುಗ್ರಹೋತ್ಸವಃ ಪ್ರೋಕ್ತಃ ಸತೀರ್ಥಶ್ಚೋಡುಪೋತ್ಸವಃ ॥

**ಪೂಜಕಸ್ಯದಿಕ್ ನಿರ್ಣಯಃ**

ಪಶ್ಚಿಮಾಸನ ಲಿಂಗಸ್ಯ ಜೋತ್ತರಾಭಿಮುಖೋ ಯಜೇತ್ ।
ಸೌಮ್ಯಾನನಸ್ಯ ಲಿಂಗಸ್ಯ ಪ್ರಾಚ್ಯಾಮಭಿಮುಖೋ ಯಜೇತ್ ॥

ಶುಚಿಃ ಸಂಭೃತ ಸಂಭಾರಃ ಪ್ರಾಗ್ದರ್ಭೈಃ ಕಲ್ಪಿತಾಸನಃ ।
ಆಸೀನಃ ಪ್ರಾಗುದಗ್ವಾರ್ಜೇದರ್ಚಯಾಮಥ ಸಮ್ಮುಖಃ ॥

**ಗೋಪ್ಯಗಳು**–ಪ್ರಯೋಕ್ತವ್ಯಶ್ಚ ರಹಸಿ ನ ಬಹಿರ್ಜನಸಂಸದಿ ।
ಮಂತ್ರಮಂಡಲಮುದ್ರಾಶ್ಚ ಗುಪ್ತಿರೇಷಾ ಸನಾತನೀ ॥

**ವಸ್ತ್ರಾಲಂಕಾರ**–ಶಿಲ್ಪಿನಾ ವಿರಚಿತೈರ್ವಸ್ತ್ರೈಃ ಪೂಜಯಾ ನಿಷ್ಫಲಂಭವೇತ್।
ತಸ್ಮಾತ್ಸರ್ವ ಪ್ರಯತ್ನೇ ನ ವಸ್ತ್ರಾಭರಣಮುತ್ತಮಂ ॥

**ದೇವಮಾನ**—ಮಾಸಮೇಕಂ ದಿನಂ ತ್ರಿಶನ್ಮಾಸಂ ದ್ವಾದಶವತ್ಸರಂ ।
ದೇವಮಾನಮಿತಿ ಜ್ಞೇಯಂ ಜ್ಞಾತವ್ಯಂ ದೇಶಿಕೋತ್ತಮೈಃ॥

**ಪಂಚಾರ್ಘ್ಯಗಳು**

ಆವಾಹನೇ ವಿಶೇಷಾರ್ಘ್ಯಂ ನಿರೋದಾರ್ಘ್ಯಂ ನಿರೋಧನೇ ।
ತಥೈವೋದ್ವಾಸನೇ ಕಾಲೇ ಪರಾಙ್ಮುಖಮುದಾಹೃತಂ ॥
ಸಾಮಾನ್ಯಾರ್ಘ್ಯಂ ದ್ರವ್ಯಶುದ್ಧೌ ಸರ್ವಾರ್ಥೇ ವರ್ಧನೀಜಲಂ ॥
—ಕ್ರಿ. ಸಾ. ಉ. ೧೪

**ಸಮ್ಮಾರ್ಜನೀ**

ನಾರಿಕೇಳತರೋಃ ಪರ್ಣಕಾಷ್ಟೈರ್ಮುಷ್ಟಿದ್ವಯಂ ತಥಾ ।
ಹಸ್ತಮಾತ್ರೋನ್ನತಾ ತಾಮ್ರೈರಯೋಭಿರ್ವಾ ಸುಬಂಧಿತಾ ॥
ಸಮ್ಮಾರ್ಜನೀ ಶುಭಾ ಪ್ರೋಕ್ತಾ ದೇವಾಗಾರವಿಶುದ್ಧಯೇ ॥

### ಕವಾಟೋದ್ಘಾಟನೆ

ದೇವಪ್ರಧಾನದ್ವಾರಸ್ಯ ಕವಾಟಸ್ಯ ತು ಪಕ್ಷಯೋಃ ।
ಕೂಚೀದಂಡೇನ ಚೋನ್ಮೀಲೋದ್ಘಾಟನೇ ಚಾಸ್ತ್ರಮಂತ್ರತಃ ॥

### ಕವಾಟಬಂಧನ

ಸವ್ಯಂ ಕವಾಟಂ ಪುರುಷಂ ವಾಮಪಾರ್ಶ್ವೇ ಸ್ತ್ರಿಯಂ ತಥಾ ।
ಕಾಶ್ಯಪೀ ವ್ಯೋಮದ್ವೈವತ್ಯೇ ಬಂಧಯೇನ್ನೇತ್ರ ಮಂತ್ರತಃ ॥

### ಆವಾಹನಾದಿ ಮುದ್ರಾಸ್ವರೂಪ

**ಆವಾಹನಂ**—ಶಿವಸ್ಯ ಸದಾಶಿವ ದೇಹಪ್ರಾಪಣಮ್

**ಸ್ಥಾಪನಂ**—ಸದಾಶಿವಸ್ಯ ಹೃದಯಾಂಬುಜೇಽವಸ್ಥಾಪನಮ್

**ಸನ್ನಿಧಾಪನಂ**—ಅಭಿಮುಖೀಕರಣಮ್

**ಸನ್ನಿರೋಧನಂ**—ಯಾವತ್ಪೂಜಾಸಮಾಪ್ತಿ ಸನ್ನಿಧಾನ ಪ್ರಾರ್ಥನಮ್

**ಅವಕುಂಠನಂ**—ಭಕ್ತೇಷ್ಟ ಪ್ರಕಾಶಾರ್ಥಂ ವಿಘ್ನಾನಾಮಪ್ರಾಪ್ತ್ಯರ್ಥಂ ಚ ಕವಚೇನಾಚ್ಛಾದನಮ್

**ಸಕಲೀಕರಣಂ**—(ಪು. ೪೩೨) **ಪರಮೀಕರಣಂ** (ಪು. ೪೩೯)

**ಅಮೃತೀಕರಣಂ**—ವಿಗ್ರಹಸ್ಯ ಶಿವಸ್ಯ ಚಾಭೇದೇನ ಪ್ರತಿಪತ್ತಿಃ

—ಕ್ರಿ. ಸಾ. ii ಪು. ೨೬೪

### ಅಂತರ್ಯಾಜನಯೋಗ್ಯ ಅಷ್ಟಪುಷ್ಪಗಳು

ಸತ್ಯಂ ಪುಷ್ಪಂ ಕ್ಷಮಾ ಪುಷ್ಪಂ ವಸ್ತುಷ್ವಾಚ್ಛಾವಚೇಷ್ವಪಿ ।
ಅನನ್ಯಪೀಡನಂ ಪುಷ್ಪಂ ಪರೋಪಕೃತಿರುತ್ತಮಂ ॥

ಸ್ವಮತೇ ವಿಮತೇ ಮೂಢೇ ಪರಾರಾವುಪಕರ್ತರಿ ।
ಸರ್ವತ್ರಭಾವಯೆದೇಕಂ ವೀರಶೈವಮತೇ ಶಿವೇ ॥

ಯಃ ಪೂಜಯೇನ್ಮಾಮೀಶಾನಿ ಪುಷ್ಪೈರೇ ತೈರತಂದ್ರಿತಃ ॥

—ಪಾರಮೇಶ್ವರ ಪ. ೧೦

"ಅಹಿಂಸೇಂದ್ರಿಯನಿಗ್ರಹ–ಕ್ಷಮಾ–ದಯಾ–ಜ್ಞಾನ–ತಪ-ಸ್ಸತ್ಯ-ಭಾವ ರೂಪೈರಷ್ಟಪುಷ್ಪೈರಭ್ಯರ್ಚಯೇತ್" —ಕ್ರಿ. ಸಾ. ii ಪು. ೨೩೧

## ಮಂತ್ರಪುರಶ್ಚರಣಸಿಧಿ

ಜೀವಹೀನೋ ಯಥಾ ದೇಹಃ ಸರ್ವಕರ್ಮಸು ನ ಕ್ಷಮಃ ।
ಪುರಶ್ಚರಣ ಹೀನೋಽಪಿ ನ ಮಂತ್ರಃ ಸಿದ್ಧಿದಾಯಕಃ ॥

ಪುರೋಽಗ್ರತಶ್ಚರಣಂ = ಮಂತ್ರಜಪಾದಿ ಪಂಚಾಂಗ ಕರ್ಮಾಚರಣ ಮಿತಿಯಾವತ್—

ಜಪಹೋಮೌ ತರ್ಪಣಂ ಚಾಭಿಷೇಕೋ ರುದ್ರಭೋಜನಂ ।
ಪಂಚಾಂಗೋಪಾಸನಂ ಲೋಕೇ ಪುರಶ್ಚರಣಮುಚ್ಯತೇ ॥

ಸಾಧಕನು ಮಂತ್ರಬಲದಿಂದ ಇಷ್ಟದೇವತೆಯನ್ನು ಒಲಿಸಿಕೊಳ್ಳಬೇಕು. ಮಂತ್ರವು ಪುರಶ್ಚರಣದಿಂದ ಸ್ವಾಧೀನವಾಗುತ್ತದೆ. ಪಂಚಾಂಗೋಪಾಸನ, ಜಪ, ಹೋಮ, ತರ್ಪಣ, ಅಭಿಷೇಕ ಮತ್ತು ರುದ್ರಭೋಜನವೆಂದು ಪುರಶ್ಚರಣವು ಆರು ಬಗೆ. ಇವುಗಳಲ್ಲಿ ಮೊದಲನೆಯದು ಪಂಚಾಂಗೋಪಾಸನ–

ಭಕ್ತನು ಇಷ್ಟ ದೇವತೆಯನ್ನು ಪ್ರಸನ್ನಗೊಳಿಸಲು ಗೀತಾ, ಸಹಸ್ರನಾಮ, ಸ್ತವ, ಕವಚ ಮತ್ತು ಹೃದಯ ಎಂಬ ಐದು ಅಂಗಗಳಿಂದ ಆರಾಧಿಸಬೇಕು. ಶಿವಮಂತ್ರಕ್ಕೆ ಶಿವಗೀತಾ, ಶಿವಸಹಸ್ರನಾಮ ಮತ್ತು ಶಿವಕವಚಗಳಿವೆ. ಸ್ತವವೆಂದರೆ ಸ್ತೋತ್ರ. ಶಿವಸ್ತೋತ್ರಪಾರಾಯಣ. ಹೃದಯವು ಬಳಕೆಯಲ್ಲಿಲ್ಲ.

ಪ್ರತಿಯೊಂದು ಮಂತ್ರಕ್ಕೂ ಋಷ್ಯಾದಿ ಪಲ್ಲವ*ಗಳನ್ನು ಹೇಳಿಕೊಳ್ಳಬೇಕು. ಋಷಿ, ಛಂದಸ್ಸು, ದೇವತಾಬೀಜ, ಶಕ್ತಿ, ಕೀಲಕ, ವಿನಿಯೋಗ, ಅಂಗನ್ಯಾಸ, ಕರನ್ಯಾಸ, ದೇಹನ್ಯಾಸ ಮತ್ತು ದಿಗ್ಬಂಧ ಎಂಬ ಹನ್ನೆರಡು ಅಂಗಗಳಿವೆ.

**ಋಷಿ**—ಮಂತ್ರವನ್ನು ಸಾಕ್ಷಾತ್ಕಾರಮಾಡಿಕೊಂಡವನು. "ಮಂತ್ರದ್ರಷ್ಟಾ" ಎಂದು ಅವನಿಗೆ ಹೆಸರು. ಅಂಥ ಮಹರ್ಷಿಯನ್ನು ಶಿರಸ್ಸಿನಲ್ಲಿ ಧರಿಸಬೇಕು. ಇದರಿಂದ ಮಂತ್ರವು ವೀರ್ಯವತ್ತರವಾಗುತ್ತದೆ.

---

*ಮಂತ್ರಗಳ ನ್ಯಾಸ ಮತ್ತು ಪಲ್ಲವಗಳ ಬಗ್ಗೆ ವೀ. ಪ್ರೂ. ರ. ಪು. ೪೧೧–೪೧೨ ನೋಡಿ.

**ಛಂದಸ್ಸು**—ಮಂತ್ರಗಳು "ಅನುಷ್ಟುಪ್" ಮುಂತಾದ ಛಂದಸ್ಸುಗಳಲ್ಲಿವೆ. ಅದನ್ನು ಮುಖದಲ್ಲಿ ಧರಿಸುವುದರಿಂದ ಛಂದೋಭಿಮಾನದೇವತೆಯ ಅನುಗ್ರಹ ದೊರೆಯುತ್ತದೆ.

**ದೇವತೆ**—ಪ್ರತಿಯೊಂದು ಮಂತ್ರಕ್ಕೂ ಒಂದು ದೇವತೆಯುಂಟು. ಆ ದೇವತೆಯನ್ನು ಹೃದಯದಲ್ಲಿ ಧರಿಸಬೇಕು.

**ಬೀಜ**–ಮಂತ್ರದ ಯಾವ ಭಾಗದಲ್ಲಿ ಪ್ರಧಾನಭಾಗವು ಹುಟ್ಟುವುದೋ ಅದು ಬೀಜ.

**ಶಕ್ತಿ**—ಭಕ್ತನನ್ನು ನಿರ್ದಿಷ್ಟ ಧ್ಯೇಯದ ಕಡೆಗೆ ಕರೆದೊಯ್ಯುವುದು ಶಕ್ತಿ.

**ಕೀಲಕ**—ಶಕ್ತಿಯನ್ನು ಧ್ಯೇಯಕ್ಕೆ ಸಂಬಂಧಪಡಿಸುವುದು ಕೀಲಕ. ಇವು ಮೂರೂ ಸ್ತೋತ್ರ ಭಾಗವಾಗಿಯೂ ಇರಬಹುದು. ಅಥವಾ ಬೀಜಾಕ್ಷರ ರೂಪವಾಗಿಯೂ ಇರಬಹದು.

**ವಿನಿಯೋಗ**—ಸ್ತೋತ್ರ (ಮಂತ್ರ) ವನ್ನು ಯಾವ ಉದ್ದೇಶಕ್ಕೆ ಉಪಯೋಗಿಸುತ್ತೇವೆ ಎಂಬುದು. ಆದರೆ ಅದು ಭಗವತ್ಪ್ರೀತ್ಯರ್ಥವಾಗಿದ್ದರೆ ಒಳ್ಳೆಯದು.

**ಅಂಗನ್ಯಾಸ**–"ಶಿವರೂಪ ಪ್ರಾಪ್ತ್ಯರ್ಥಂ ನ್ಯಾಸಃ" ಜೀವಶುದ್ಧಿ ಪೂರ್ವಕಂ ನ್ಯಸ್ತ ಮಂತ್ರತನುಸ್ಸ್ವರೂಪೇಣ ವಿಗ್ರಹೇಣ ಚ ಶಿವರೂಪತಾಂ ಪ್ರಾಪ್ತಃ ಶಿವಾರ್ಚಾಯೋಗ್ಯೋ ಭವತಿ "ನಾಶಿವಶ್ಶಿವಮರ್ಚಯೇದಿತಿ ಹ್ಯಾಮನಂತಿ" (ಏವಂ ಜೀವ-ದೇಹಶುದ್ಧಿ ಕರಣಾಶಕ್ತೌ ನ್ಯಾಸಮಾತ್ರಂ ಕುರ್ಯಾತ್ । ನ್ಯಾಸಸ್ಯಾಪಿ ಕೃತ್ಸ್ನಸ್ಯ ಕರಣಾಶಕ್ತೌ ದಂಡನ್ಯಾಸಮಾತ್ರಂ ಷಡಂಗನ್ಯಾಸಮಾತ್ರಂ ವಾ ಕುರ್ಯಾತ್। ತಾವತೈವ ದೇಹಾತ್ಮನೋಃ ಶುದ್ಧ್ಯಾ ಶಿವರೂಪತಾಪತ್ತ್ಯಾ ಚ ಶಿವಾರ್ಚನ ಯೋಗ್ಯೋ ಭವತಿ) —ಕ್ರಿಯಾಸಾರ ii ಪು. ೨೩೦

ಉದಾಹರಣೆಗಾಗಿ ಓಂ ಓಂ ನಂ ಸರ್ವಜ್ಞಶಕ್ತಿ ಧಾಮ್ನೇ ಈಶಾನಾತ್ಮನೇ ಅಂಗುಷ್ಠಾಭ್ಯಾಂ ನಮಃ" ಎಂದು ಮುಂತಾಗಿ ಓಂಕಾರ ಪೂರ್ವಕವಾಗಿ ಷಡಕ್ಷರ ಮಂತ್ರದ ಬೀಜಾಕ್ಷರ ಭಾಗಗಳನ್ನು ಪರಶಿವನ ಬೇರೆ ಬೇರೆ ಬ್ರಹ್ಮಮೂರ್ತಿಗಳ ನಾಮಗಳೊಂದಿಗೆ ಕರಾಂಗುಲಿಗಳಲ್ಲಿಯೂ ಹೃದಯಾದಿ ಅಂಗ

ಗಳಲ್ಲಿಯೂ "ನ್ಯಾಸ" ಎಂದರೆ ಸ್ಥಾಪಿಸುವುದರಿಂದ ಸಾಧಕನು ಶಿವಸ್ವರೂಪ ವನ್ನು ಪಡೆಯುವನು.

ದಿಗ್ಬಂಧ—"ಓಂ ಭೂರ್ಭುವಸ್ಸುವರೋಂ" ಎಂದು ಹೇಳಿ ದಿಗ್ಬಂಧನ ಮಾಡುವುದರಿಂದ ಮುಂದೆ ಮಾಡುವ ಜಪಾದಿಗಳ ಕಾಲದಲ್ಲಿ ಆಯಾ ದಿಕ್ಕು ಗಳಿಂದ ಸಂಭವಿಸುವ ಎಲ್ಲ ವಿಧವಾದ ವಿಘ್ನಗಳ ನಿವಾರಣವಾಗುತ್ತದೆ.

## ಜಪವಿಧಾನ

ಅಥೈತಸ್ಯ ಪ್ರವಕ್ಷ್ಯಾಮಿ ಪುರಶ್ಚರಣಮುತ್ತಮಂ ।
ಪಂಚಲಕ್ಷಂ ಜಪೇದ್ದೇವಿ ದೀಕ್ಷಿತಶ್ಚ ವಿಶೇಷತಃ ॥
ಅನಶ್ನಂಸ್ತತ್ಪರೋ ಭೂತ್ವಾ ತಾವತ್ಸಂಖ್ಯಾದಶಾಂಶಕೈಃ ।
ಕ್ಷೀರಾಜ್ಯೈಸ್ತರ್ಪಯಿತ್ವಾಥ ಜುಹುಯಾತ್ತದ್ದಶಾಂಶಕೈಃ ॥
ಪಾಯಸೈಃ ಶರ್ಕರಾಭಿಶ್ಚ ತತೋ ಭಕ್ತಾನ್ ಶಿವವ್ರತಾನ್ ।
ವೇದಮಾರ್ಗೈಕನಿರತಾನ್ಸದಾಚಾರಪರಾಯಣಾನ್ ॥
ಸ್ವಧರ್ಮನಿರತಾನ್ ಶಾಂತಾನ್ ಭೋಜಯೇತ್ತದ್ದಶಾಂಶತಃ ।
ಏವಂ ಕೃತ್ವಾ ಮಹಾದೇವಿ ಪೌರಶ್ಚರಣಿಕೋ ಭವೇತ್ ॥
ತತಃ ಸಿದ್ಧಮಿದಂ ಮಂತ್ರಂ ಜಪೇನ್ನಿತ್ಯಮತಂದ್ರಿತಃ ॥
ಅಷ್ಟೋತ್ತರಸಹಸ್ರಂ ವಾಪ್ಯಷ್ಟೋತ್ತರಶತಂ ಚ ವಾ ।
ನಿರ್ದಹ್ಯ ಸರ್ವಪಾಪಾನಿ ಮಮ ಲೋಕೇ ಮಹೀಯತೇ ॥
ಸಾಧಕೋ ಯದಿ ಕಾಮಿಸ್ಸ್ಯಾದಿಷ್ಟಾನ್ಕಾಮಾನ್ ಪ್ರಸಾಧಯೇತ್॥

—ಸೂಕ್ಷ್ಮತಂತ್ರ ಪ. ೩

ವಿ.ಸೂ :—ಈ ಭಾಗವನ್ನು ತಜ್ಞಗುರುವಿನಿಂದ ಚೆನ್ನಾಗಿ ಅರಿತು ಆಚರಿಸಬೇಕು.

## ಪ್ರಯೋಗ ಮತ್ತು ಮಂತ್ರಾರ್ಥ

ಪರಶಿವನ ನಿಶ್ವಾಸರೂಪವಾದ ವೇದ (ಶ್ರುತಿ) ವೆಲ್ಲವೂ ಮಂಗಳಕರವೇ. ಅಲ್ಲಿ ದೇವತಾಸ್ತುತಿ ಪರವಾದ ಯಾವ ಮಂತ್ರವನ್ನಾದರೂ ಹೇಳಿಕೊಂಡು ಶುಭ ಕಾರ್ಯಗಳನ್ನು ಮಾಡಿಸಬಹುದು. ವೇದಮಂತ್ರಗಳ ಅರ್ಥಕ್ಕೂ ಮತ್ತು ಪ್ರಯೋ

ನಂ. ೯

ದೇವತಾ ಸ್ಥಾಪನೋಪಯುಕ್ತ ನವಕೋಣ ಚಕ್ರ

| | | |
|---|---|---|
| ೬ | ೧ | ೮ |
| ೭ | ೫ | ೩ |
| ೨ | ೯ | ೪ |

ನಂ. ೮ ಗರ್ಭನ್ಯಾಸ ಮಂಡಲ

| | | | | |
|---|---|---|---|---|
| ಅಂ | ಅಃ | ಅ | ಆ | ಇ |
| ಔ | ಹ | ಯ | ರ | ಈ |
| ಓ | ಸ | ಕ್ಷಂ | ಲ | ಉ |
| ಐ | ಷ | ಶ | ವ | ಊ |
| ಏ | ೡ | ಌ | ೠ | ಋ |

ನಂ. ೧೦. ದೇವತಾಸ್ಥಾಪನೋಪಯುಕ್ತ ೮೧ ಕೋಣಗಳ ಚಕ್ರ

| | | | | | | | | |
|---|---|---|---|---|---|---|---|---|
| ೫೧ | ೪೬ | ೫೩ | ೬ | ೧ | ೮ | ೬೯ | ೬೪ | ೭೧ |
| ೫೨ | ೫೦ | ೪೮ | ೭ | ೫ | ೩ | ೭೦ | ೬೮ | ೬೬ |
| ೪೭ | ೫೪ | ೪೯ | ೨ | ೯ | ೪ | ೬೫ | ೭೨ | ೬೭ |
| ೬೦ | ೫೫ | ೬೨ | ೪೨ | ೩೭ | ೪೪ | ೨೪ | ೧೯ | ೨೬ |
| ೬೧ | ೫೯ | ೫೭ | ೪೩ | ೪೧ | ೩೯ | ೨೫ | ೨೩ | ೨೧ |
| ೫೬ | ೬೩ | ೫೮ | ೩೮ | ೪೫ | ೪೦ | ೨೦ | ೨೭ | ೨೨ |
| ೧೫ | ೧೦ | ೧೭ | ೭೮ | ೭೩ | ೮೦ | ೩೩ | ೨೮ | ೩೫ |
| ೧೬ | ೧೪ | ೧೨ | ೭೯ | ೭೭ | ೭೫ | ೩೪ | ೩೨ | ೩೦ |
| ೧೧ | ೧೮ | ೧೩ | ೭೪ | ೮೧ | ೭೬ | ೨೯ | ೩೬ | ೩೧ |

ಗದಲ್ಲಿ ಆಯಾ ಮಂತ್ರಗಳ ವಿನಿಯೋಗಕ್ಕೂ ಯಾವ ಸಂಬಂಧವೂ ಇರುವುದಿಲ್ಲ. ಉದಾ:–'ಗಂಧದ್ವಾರಾಂ' ಎಂಬ ಮಂತ್ರಕ್ಕೆ ಲಕ್ಷ್ಮೀದೇವತೆ "ಯುವಂ ವಸ್ತ್ರಾಣಿ" ಎಂಬ ಮಂತ್ರವು "ಮಿತ್ರಾವರುಣ" ದೇವತಾಕವಾದುದು. ಆದರೆ ಈ ಮಂತ್ರಗಳಲ್ಲಿ ಬರುವ "ಗಂಧ" ಮತ್ತು "ವಸ್ತ್ರ" ಎಂಬ ಮಂತ್ರ (ಶಬ್ದ) ಲಿಂಗಗಳಿಂದ "ಯಲ್ಲಿಂಗಂ ತದ್ದೇವತಾ" ಎಂಬ ಉಕ್ತಿಯಂತೆ ಈ ಮಂತ್ರಗಳನ್ನು "ಗಂಧಧಾರಣ" ಮತ್ತು "ವಸ್ತ್ರಧಾರಣ"ಗಳಲ್ಲಿ ಮಹರ್ಷಿಗಳು ವಿನಿಯೋಗಿಸಿದ್ದಾರೆ. ಇದರಂತೆ ವೇದಸೂಕ್ತ ಹಾಗೂ ಮಂತ್ರ (ಋಕ್ಕು) ಗಳಲ್ಲಿ ಬರುವ ಶಬ್ದಲಿಂಗಾದಿ ಚಿನ್ಹೆಗಳಿಂದ ಅವುಗಳನ್ನು ಆಯಾ ದೇವತೋಪಾಸನ-ಜಪ-ಪಾರಾಯಣಾದಿಗಳಿಗೆ ವಿನಿಯೋಗಮಾಡಬಹುದೆಂದು ಪ್ರಯೋಗಜ್ಞರಾದ ಮಹರ್ಷಿಗಳು ನಿರ್ಧರಿಸಿರುತ್ತಾರೆ.

## ಗರ್ಭನ್ಯಾಸವಿಧಿ (ಚಿತ್ರ ೮)

ದೇವಾಲಯ ಅಥವಾ ಗ್ರಾಮಾದಿಗಳು ಉತ್ತರೋತ್ತರ ಅಭಿವೃದ್ಧಿಯಾಗಬೇಕಾದರೆ ಗರ್ಭನ್ಯಾಸ ಮಾಡಬೇಕು. ದೇವತಾಪ್ರತಿಷ್ಠೆಗೆ ಮುಂಚೆ ಅಥವಾ ಪ್ರತಿಷ್ಠೆಯ ತರುವಾಯ ಇಲ್ಲವೆ ಪ್ರತಿಷ್ಠೆಯಾದ ಒಂದು ವರ್ಷದ ನಂತರವಾಗಲಿ ಗರ್ಭನ್ಯಾಸ ಮಾಡಬಹುದು. ಗರ್ಭನ್ಯಾಸ ಮಂಡಲವನ್ನು (ಚಿತ್ರ ನಂ. ೮) ಚಿನ್ನ-ಬೆಳ್ಳಿ, ಕಂಚು ಅಥವಾ ತಾಮ್ರದ ತಗಡಿನ ಭರಣಿಯ ತಳದಲ್ಲಿ ಬರೆಯಿಸಿ ಅದರ ೨೫ ಮನೆಗಳಲ್ಲಿ ಮಂಡಲದಲ್ಲಿರುವಂತೆ ಬೀಜಾಕ್ಷರಗಳನ್ನು ತುಂಬಿ ಆಯಾ ಮನೆಗಳಲ್ಲಿ ಕೆಳಗೆ ಕಾಣಿಸಿರುವ ಪ್ರಕಾರ ಕೂಟಾ (ಮಧ್ಯ)ದಿ ಸ್ಥಾನಗಳಲ್ಲಿ ಮಾಣಿಕ್ಯಾದಿಗಳನ್ನು ಇಟ್ಟು ವಾಸ್ತುಪೂಜಾ ಅಧಿವಾಸಾದಿಗಳನ್ನು ಮಾಡಿ ಭರಣಿಯನ್ನು ಬಂಧಿಸಿ ಸುಮುಹೂರ್ತದಲ್ಲಿ ತಲಬಾಗಿಲಿನ ದಕ್ಷಿಣದಲ್ಲಿ ಭೂಸ್ಥಾಪನೆ ಮಾಡಬೇಕು. ಕರ್ತನು ವಿಪ್ರನಾದರೆ ಅದೇ ದಿಕ್ಕಿನ ಗೋಡೆಯಲ್ಲಿಯೂ, ಕ್ಷತ್ರಿಯನಿಗೆ 'ಕುಮು'ಗದ ಮೇಲೆಯೂ ವೈಶ್ಯನಿಗೆ'ಜಗತಿ'ಯಲ್ಲಿಯೂ, ಶೂದ್ರನಿಗೆ 'ಉಪಾನ'೨ದಲ್ಲಿಯೂ ಸ್ಥಾಪಿಸಬೇಕು. ದೇವಾಲಯದಲ್ಲಿ ಹಗಲಿನಲ್ಲಿಯೂ, ಗ್ರಾಮಾದಿಗಳಿಗೆ ರಾತ್ರಿಯಲ್ಲಿಯೂ ಸ್ಥಾಪಿಸತಕ್ಕದ್ದು.

---

೧, ೨ ಶಿಲ್ಪಶಾಸ್ತ್ರಸಿದ್ಧ ಆಯಾ ಹೆಸರಿನ ಶಿಲಾವಿಶೇಷಗಳು.

## ೨೫ ಮನೆಗಳಲ್ಲಿ ಮಾಣಿಕ್ಯಾದಿಗಳನ್ನು ಸ್ಥಾಪಿಸುವ ಕ್ರಮ

ಕೂಟ (ಕ್ಷಂ) ಮಾಣಿಕ್ಯ, ಯಂ-ವಜ್ರಗೈರಿಕ, ರಂ-ವೈಡೂರ್ಯ, ಲಂ-ನೀಲ, ವಂ-ಮುತ್ತು, ಶಂ-ಪುಷ್ಯರಾಗ, ಷಂ-ಮರಕತ, ಸಂ-ಗೋಮೇಧ, ಹಂ-ಸ್ಫಟಿಕಃ, ಅಂ-ಸುವರ್ಣದ ಶೂಲ, ಆಂ-ರಜತ ಕಪಾಲ, ಇಂ-ತಾಮ್ರದ ಕೂರ್ಮ ಈಂ-ಹಿತ್ತಾಳಿಮಂಚ, ಉಂ-ಭ್ರಾಮಕಪಿನಾಕ, ಊಂ-ಸುವರ್ಣ ಕುಂತಲ, ಋಂ-ಕಂಚಿನ ಹರಿಣ, ೠಂ-ಕಬ್ಬಿಣತ್ರಿಶೂಲ, ಌಂ-ತಾಮ್ರದ ದೀಪಸ್ತಂಭ, ೡಂ-ಕಬ್ಬಿಣದ ಹಲ್ಲಿ, ಏಂ-ತಾಮ್ರದ ಕರ್ಪಕ, ಐಂ-ಚಿನ್ನದ ಲಕ್ಷ್ಮಿ ,ಓಂ-ತಾಮ್ರದ ಕುಂಭ, ಔಂ-ಬೆಳ್ಳಿ ಸ್ವಸ್ತಿಕ, ಅಂ-ಚಿನ್ನದ ಚಕ್ರ, ಅಃ-ಬೆಳ್ಳಿ ಶಂಖ.

## ದೇವತಾಪೀಠದಲ್ಲಿ ಸ್ಥಾಪಿಸುವ ಯಂತ್ರಗಳು

ಪ್ರತಿಷ್ಠಿಸಿದ ದೇವತಾ ವಿಗ್ರಹದಲ್ಲಿ ಕಲಾಸ್ಥಿರೀಕರಣವುಂಟಾಗಿ ದೇವತೆಗೆ ವರದಾತೃತ್ವ, ದೇವಗಣಾರ್ಚನತ್ವಾದಿ ಮಹಿಮೆಗಳು ವರ್ಧಿಸಲಿಕ್ಕಾಗಿ ಕಲಾ ಯಂತ್ರಗಳನ್ನು ಲಿಖಿಸಿ ಅಧಿವಾಸಾದಿಗಳನ್ನು ಮಾಡಿ ಬ್ರಹ್ಮ ಶಿಲೆಯಲ್ಲಿ[೧] ಸ್ಥಾಪಿಸಿ ಅದರ ಮೇಲೆ ಪೀಠವನ್ನು ಅಷ್ಟಬಂಧಾದಿಗಳಿಂದ ಬಂಧಿಸಿ ಮೂರ್ತಿಯನ್ನು ಪೀಠದಲ್ಲಿ ಸ್ಥಾಪಿಸಬೇಕು.

## ದೇವತಾಸಂಖ್ಯಾ ಚಕ್ರ (ಚಿತ್ರ ೯)

ದೇವತೆಯ ಹೆಸರಿನ ಅಕ್ಷರ ಸಂಖ್ಯೆ, ನಕ್ಷತ್ರ, ರಾಶಿ ಮತ್ತು ರಾಶಿಯ ಅಧಿಪತಿ ಸಂಖ್ಯೆಗಳನ್ನು ಒಟ್ಟುಗೂಡಿಸಿ ಅದನ್ನು ಚಕ್ರದ ೯ ಮನೆಗಳಲ್ಲಿ ಸೂಚಿಸಿರುವ ಕ್ರಮದಂತೆ ತುಂಬಬೇಕು. ಹೀಗೆ ತುಂಬಿದಾಗ ಯಾವ ಕಡೆಯಿಂದ ಕೂಡಿದರೂ ಒಂದೇ ಸಂಖ್ಯೆ ಬರುತ್ತದೆ. ಉದಾ :—ದೇವತೆ ಹೆಸರು 'ಗಣಪತಿ' ಅಕ್ಷರ ಸಂಖ್ಯೆ ೪, 'ಗ ಗಿ ಗು ಗೆ' ಅವಕಹಡ ನಕ್ಷತ್ರ ಸಂಖ್ಯೆ ೨೨ ನಕ್ಷತ್ರದ ರಾಶಿ (ಮಕರ) ೧೦, ರಾಶ್ಯಧಿಪತಿ-ಶನಿ ೭ ಒಟ್ಟು ಸಂಖ್ಯೆ ೪೩ ಒಂಭತ್ತು ಮನೆಗಳಲ್ಲಿ ೪೩ ರಿಂದ ೫೧ರ ವರೆಗೆ ತುಂಬಬೇಕು.

## ೮೧ ಕೋನಗಳ ಚಕ್ರ (ಚಿತ್ರ ೧೦)

ಇಲ್ಲಿಯೂ ಆಯಾ ದೇವತೆಯ ಹೆಸರಿನ ಅಕ್ಷರ ಸಂಖ್ಯಾ ಮುಂತಾದು

---

೧ ಮೂರ್ತಿಸ್ಥಾಪನೆಯ ಪೀಠದ ಕೆಳಗಿನ ಶಿಲೆ.

ವನ್ನು ಒಟ್ಟುಗೂಡಿಸಿ ಚಿತ್ರ ೧೦ ದಲ್ಲಿ ಸೂಚಿಸಿರುವ ಪ್ರಕಾರ ತಗಡಿನಲ್ಲಿ ೮೧ ಮನೆಗಳ ಚಕ್ರ ರಚಿಸಿ ಸಂಖ್ಯೆಗಳನ್ನು ತುಂಬಿ, ಅಧಿವಾಸಾದಿಗಳಿಂದ ಶುದ್ಧಿಪಡಿಸಿ ಶಾಂಭವೀ ಉದ್ಧರಣೆ (ನಂ. ೧೩) ಮತ್ತು ಚಿದಂಬರೋದ್ಧರಣೆ (ನಂ. ೧೪) ಗಳನ್ನು ಸಹ ಶುದ್ಧಪಡಿಸಿ ಬ್ರಹ್ಮಶಿಲೆಯಲ್ಲಿಟ್ಟು ಪೀಠವನ್ನು ಅಷ್ಟಬಂಧದಿಂದ ಬಂಧಿಸಬೇಕು. ಉಳಿದ ಆಯಾ ದೇವತೆಯ ಕಲಾಯಂತ್ರಾದಿಗಳು ಮಂತ್ರಮಹೋದಧಿ ಮುಂತಾದ ಗ್ರಂಥಗಳಲ್ಲಿ ಚಿತ್ರಸಹಿತ ನಮೂದಿಸಿವೆ. ವಿಸ್ತಾರಭಯದಿಂದ ಇಲ್ಲಿ ಕೊಡಲಾಗಿಲ್ಲ.

## ಗ್ರಂಥ ಪರಿಸಮಾಪ್ತಿಃ

ಶ್ರೀಮತ್ಪಂಡಿತ ದೇಶಿಕಪ್ರವರಗಃ ಶ್ರೀ ವೀರಶೈವಾನ್ವಯ
ಭ್ರಾಜತ್ ಶ್ರೀ ನಿಡುಮಾಮಿಡೀ ಗುರುಕೃಪಾವಾರಾಶಿಕಲ್ಲೋಲಭೂಃ ।
ನಂಜುಂಡಾರ್ಯ ಬುಧೋ ಜಯತ್ಯವಿರತಂ ಗಂಗಾಧರಾರ್ಯಾತ್ಮಜಃ ।
ಶ್ರೀಮತ್ಸಂಸ್ಕೃತ ಹೃತ್ಪ್ರಮೋದ ವಿಬುಧಾಲಂಕಾರವಿದ್ಮನ್ಮಣಿಃ ॥

ವೀರಾಂಬಾಪುಣ್ಯಗರ್ಭಾಚ್ಚ ಸಂಭೂತೋಽಸೌ ಸುಧಾಕರಃ ।
ವೇದವೇದಾಂತ ಸಿದ್ಧಾಂತ ಸಾರಜ್ಞಃ ಸಂಸ್ಕೃತಾಶಯಃ ॥

ವೀರಶೈವಾಗಮಜ್ಞೇನ ಶಿವಾದ್ವೈತಸುಧಾವಿದಾ ।
ಶೈವಾಗಮಪ್ರಯೋಗೋಽಯಮರ್ಪಿತಶ್ಶಿವಸನ್ನಿಧೌ ॥

ವಿಯದ್ರತ್ನಾಷ್ಟ ಶುಭ್ರಾಂಶುಮಿತೇ ಪ್ಲವಗವತ್ಸರೇ ।
ಸೋಮವಾರೇ ಶಿವೇ ರಾತ್ರೌ ಗ್ರಂಥಃ ಸಂಪೂರ್ಣತಾಮಗಾತ್ ॥

ಶಾಲಿವಾಹನ ಶಕ ವರ್ತಮಾನ ೧೮೮೦ ಪ್ಲವಂಗ ಸಂ॥
ಮಾಘ ಕೃಷ್ಣ ೧೪ ಸೋಮವಾಸರಃ ಮಹಾ ಶಿವರಾತ್ರಿಃ
ದಿನಾಂಕ ೨೭-೨-೧೯೬೮



# ಅನುಬಂಧ ೩

## ವೀರಶೈವಾಗಮ ಪ್ರಯೋಗರತ್ನದಲ್ಲಿ ಉಕ್ತವಾಗಿರುವ ಕಾರ್ಯಗಳಿಗೆ ಬೇಕಾಗುವ ಪದಾರ್ಥಗಳು

ವಿ. ಸೂ :—ಪ್ರತಿಷ್ಠಾ, ಮಹೋತ್ಸವ ಮತ್ತು ಉಗ್ರರಥ ಶಾಂತಿ ಮುಂತಾದ ಮಹತ್ಕಾರ್ಯಗಳು ಬಹು ವಿತ್ತಸಾಧ್ಯಗಳು. ಆದರೂ ಅವು ಬಡವ ಮತ್ತು ಬಲ್ಲಿದರು ಎಂಬ ಭೇದವಿಲ್ಲದೆ ಎಲ್ಲರಿಗೂ ಸುಲಭ ಸಾಧ್ಯವಾಗ ಬೇಕು ಎಂಬ ದೃಷ್ಟಿಯಿಂದ ಕಲಶ ಸಂಖ್ಯೆಯನ್ನು ಮೂರು ವರ್ಗಗಳಾಗಿ ವಿಂಗಡಿಸಿದೆ. ಶ್ರದ್ಧಾನ್ವಿತನಾದ ಕರ್ತನು ತನ್ನ ಶಕ್ತಿವಂಚನೆಯನ್ನು ಮಾಡಿ ಕೊಳ್ಳದೆ ಆಗಮ ಕರ್ಮಗಳನ್ನು ಶಿವಾರ್ಪಿತಬುದ್ಧಿಯಿಂದ ಮಾಡಬೇಕು. ಪುರಹಿತಾಕಾಂಕ್ಷಿಯಾದ ಆಗಮಿಕ (ಪುರೋಹಿತ) ನು ಕರ್ತನ ಶಕ್ತಿಯನ್ನು ಅನುಲಕ್ಷಿಸಿ ಸಾಮುಗ್ರಿ ಪಟ್ಟಿಕೆಯನ್ನು ಸಿದ್ಧಪಡಿಸಬೇಕು.

### ಪ್ರತಿಷ್ಠೆ ಮತ್ತು ಮಹೋತ್ಸವ ಕಾರ್ಯಗಳಲ್ಲಿಯ ಕಲಶ* ಸಂಖ್ಯೆ

| ಕಾರ್ಯಗಳು | ೧ನೇ ವರ್ಗ | ೨ನೇ ವರ್ಗ | ೩ನೇ ವರ್ಗ |
|---|---|---|---|
| ಪುಣ್ಯಾಹ | ೨ | ೨ | ೨ |
| ಅಂಕುರಾರ್ಪಣ | ೩ | ೩ | ೩ |
| ಪ್ರವೇಶಬಲಿ | ೯ | ೯ | ೧ |
| ರಕ್ಷೋಘ್ನ | ೧ | ೧ | ೧ |
| ವಾಸ್ತು | ೧ | ೧ | ೧ |
| ಧ್ವಜಾರೋಹಣ | ೯ | ೯ | ೧ |
| ಮಂಟಪ ಪ್ರತಿಷ್ಠೆ | ೧೧೨ | ೧೨ | ೨ |
| ನವಗ್ರಹ | ೨೭ | ೧ | ದೊನ್ನೆಗಳು |

*ಇಲ್ಲಿ ಬರೆದಿರುವ ಪಾತ್ರೆಗಳು ಚಿನ್ನ, ಬೆಳ್ಳಿ, ತಾಮ್ರ, ಹಿತ್ತಾಳೆ ಅಥವಾ ಮೃಣ್ಮ ಯವಾದವುಗಳೂ ಆಗಬಹುದು. ಆದರೆ ಈ ಪಾತ್ರೆ, ಫಲ, ಪುಷ್ಪ ಮೊದಲಾದವುಗಳು ನೂತನವೂ ಪವಿತ್ರವೂ ಆಗಿರಬೇಕು.

| | | | |
|---|---|---|---|
| ಮೃತ್ಯುಂಜಯ | ೧ | ೧ | ೧ |
| ಸಭಾಧಿದೇವತೆ | ೭ | ೭ | ೭ |
| ರುದ್ರರು | ೧೧ | ೧ | ೧ |
| ಆದಿತ್ಯರು | ೧೨ | ೧ | ೧ |
| ಲಕ್ಷ್ಮೀ-ನಾರಾಯಣರು | ೨ | ೧ | ೧ |
| ಸ್ಕಂದ-ವಿರಾಟ್-ಚಂಡೇಶ | ೩ | ೩ | ೩ |
| ನಾಗ | ೮ | ೮ | ೧ |
| ಪಂಚಕಲಶ | ೫ | ೫ | ೫ |
| ಪ್ರಧಾನ-ವರ್ಧನೀ | ೧೦ | ೧೦ | ೧೦ |
| ನಿದ್ರಾ | ೧ | ೧ | ೧ |
| ಕುಂಭಾಭಿಷೇಕ | ೫ | ೧ | ೧ |
| ಶಿಖರ | ೮೧ | ೯ | ೧ |
| ಒಟ್ಟು .... | ೩೧೦ | ೮೭ | ೪೩ |

**ಪೂಜಾಸಾಮಗ್ರಿ**—(ಎಲ್ಲ ಕಾರ್ಯಗಳಿಗೂ ಬೇಕಾದವು) ಜಲ, ಭಸ್ಮ, ಗಂಧ, ಅಕ್ಷತೆ, ಅರಸಿನ, ಕುಂಕುಮ, ನಾನಾವಿಧ ಪತ್ರಪುಷ್ಪಗಳು, ಧೂಪ, ದೀಪ, ಫಲ, (ನೇವೇದ್ಯಕ್ಕೆ—ತೆಂಗಿನಕಾಯಿ, ಬಾಳೆಹಣ್ಣು ಅಥವಾ ಖರ್ಜೂರ) ತಾಂಬೂಲ, ದರ್ಭೆ, ಗರಿಕೆ, ಮಾವಿನಚಿಗುರು, ಮೂರೆಳೆಯ ಹಸಿ ನೂಲು, ಮೂರುಬಣ್ಣದ ಮೂರೆಳೆಯ ಹಸಿನೂಲು (ವಾಸ್ತು ಶಾಂತಿಗೆ ಮಾತ್ರ) ಅಗ್ರದ ಬಾಳೆಯ ಎಲೆ ಅಥವಾ ಪತ್ರಾವಳಿ, ಸುಣ್ಣ (ಕಲಶಗಳಿಗೆ ಲೇಪಿಸಲು) ಬೀಸಣಿಗೆ (ಹೋಮಾಗ್ನಿ ಪ್ರಜ್ವಲನಕ್ಕಾಗಿ) ಗಂಟೆ, ಪಂಚಪಾತ್ರೆ ಉದ್ಧರಣೆ, ದೀಪಾರ್ತಿ, ಅರ್ಘ್ಯ, ಪಾದ್ಯ, ಆಚಮನೀಯ, ಅಷ್ಟಗಂಧ, ಪಂಚಗವ್ಯ, ಪಂಚಾಮೃತ, ಗೋರೋಚನ (ಷಟ್‌ಸಮ್ಮಾರ್ಜನಕ್ಕೆ) ಸುವರ್ಣ ಅಥವಾ ಬೆಳ್ಳಿಯ ನಾಣ್ಯಗಳು, ನವರತ್ನಗಳು ಅಥವಾ ಪಂಚರತ್ನಗಳು (ಕಲಶ ಸಂಖ್ಯಾನುಗುಣವಾಗಿ) ವಿಗ್ರಹ ಪೀಠದಲ್ಲಿ ಹಾಕಲು ನವರತ್ನದಪುಡಿ ಯಂತ್ರಗಳು, ಪೂಜಾದಕ್ಷಿಣೆ-ದಾನದಕ್ಷಿಣೆ-ಸಂಭಾವನೆ ಇತ್ಯಾದಿ.

## ೧. ಪ್ರತಿಷ್ಠಾ

**ಪಾತ್ರೆಗಳು**

| | |
|---|---|
| ಬಿಂದಿಗೆ ೧ | ತಾಲಿಗಳು ೪ |
| ತಂಬಿಗೆಗಳು ೧೦ | ಕಂಚಿನ ಬಟ್ಟಲು ೧ |
| ಕಲಶಗಳು (ಆಯಾ ವರ್ಗಕ್ಕೆ ಅನುಗುಣವಾಗಿ) | ಚಮಚ ೨ |
| ತಟ್ಟೆಗಳು ೩ | ಕಬ್ಬಿಣದ ಮೊಳೆಗಳು |
| ಚರುಪಾತ್ರೆ ೧ | |

**ವಸ್ತ್ರಾಭರಣಗಳು**

| | |
|---|---|
| ಪಂಚೆ ಜೊತೆ ೫ | ರೇಶ್ಮೆ ಮುಗುಟ ೧ |
| ವಸ್ತ್ರಗಳು ಅಥವಾ ೬ಗಜ ಮಲ್ಲು | ಸೀರೆ-ಕಣ (ಸುತ್ತು-ಮಿಂಚು-ಕಡಗ-ಮಾಂಗಲ್ಯ ಇತ್ಯಾದಿ) |
| ಮಡಿಗಳು (ಋತ್ವಿಜರ ಸಂಖ್ಯಾನುಗುಣವಾಗಿ ಒಬ್ಬೊಬ್ಬರಿಗೆ ಒಂದು ಮಗುಟ ಅಥವಾ ಪಂಚೆ, ಶಲ್ಯ, ಅಕ್ಷಮಾಲೆ, ದಂಡ, ಕಮಂಡಲು, ಆಸನ ಇತ್ಯಾದಿ) | |

**ಧಾನ್ಯ**—ಭತ್ತ ೧೦೦ ಸೇರು, ಅಕ್ಕಿ ೧೦೦ ಸೇರು (ಆಯಾ ಕಾರ್ಯಾನುಗುಣವಾಗಿ)

**ನವಗ್ರಹ ಧಾನ್ಯಗಳು**—ಗೋಧಿ, ತೊಗರಿ, ಹೆಸರು, ಕಡಲೆ, ಅವರೆ, ಎಳ್ಳು, ಉದ್ದು, ಹುರುಳಿ (ಪ್ರತಿಯೊಂದೂ ೨ ಸೇರು) (ಧಾನ್ಯಾಧಿವಾಸ-ಅಂಕುರ ಮತ್ತು ಹೊಮಾದಿಗಳಿಗೆ ಸೇರಿ)

**ಮೃತ್ಯುಂಜಯ**—ಅರಳೆ—ಉಪ್ಪು—ಬೆಲ್ಲ—ಬಾಣಲೆ-ಎಣ್ಣೆ-ಕರಿಕಂಬಳಿ, ಕುಂಬಳಕಾಯಿ ಇತ್ಯಾದಿ.

**ಹೋಮ**—ಅಕ್ಕಿ ಹಿಟ್ಟು ೧ ಪಾವು.

**ನವಗ್ರಹ ಸಮಿತ್ತುಗಳು**—ಎಕ್ಕ, ಮುತ್ತುಗ, ಕಗ್ಗಲಿ, ಉತ್ತರೇಣಿ, ಅರಳಿ, ಅತ್ತಿ, ಬನ್ನಿ, ದರ್ಭೆ, ಗರಿಕೆ, (ಅರಳಿ ಸಮಿತ್ತು ಹೆಚ್ಚಾಗಿ ; ಎಲ್ಲವೂ ಒಣಗಿರಬೇಕು) ಶ್ರೀಗಂಧ ಅಥವಾ ದೇವದಾರು ಚಕ್ಕೆ ೧ ಮಣ.

ಹೋಮಾಜ್ಯ—(ಆಕಳ ತುಪ್ಪ) ೫ ಸೇರು

ಪೂರ್ಣಾಹುತಿ–ರೇಶ್ಮೆ ಕರವಸ್ತ್ರ, ಖರ್ಜೂರ, ಒಣಕೊಬ್ಬರಿ, ದ್ರಾಕ್ಷಿ ಪಚ್ಚಕರ್ಪೂರ, ಕುಂಕುಮ ಕೇಸರಿ ಇತ್ಯಾದಿ.

ಚರು—(ಪ್ರಧಾನಾಹುತಿ) ಸಜ್ಜಿಕೆ ಇತ್ಯಾದಿ.

ದರ್ಭೆಯ ಪರಿಸ್ತರಣಗಳು, ಕೂರ್ಚಗಳು, ಪರಿಧಿಗಳು ಇತ್ಯಾದಿ.

ಪ್ರತಿಮೆಗಳು—ನವಗ್ರಹ, ಪ್ರಧಾನ, ಮೃತ್ಯುಂಜಯ, ವಾಸ್ತು, ಲಕ್ಷ್ಮಿ ಮುಂತಾದ ದೇವತಾ ಪ್ರತಿಮೆಗಳು.

ಚಿನ್ನದ ಕಡ್ಡಿ—೨ (ಮೂರು ಅಂಗುಲ ನೇತ್ರೋನ್ಮೀಲನಕ್ಕಾಗಿ)

ಇತರ—ಪಂಚಪಲ್ಲವ, ಪಂಚಮೃತ್ತಿಕೆ ಇತ್ಯಾದಿ.

(ಪಂಚಕಲಶಗಳ ಪರಡಿಗಳಿಗೆ)

| | |
|---|---|
| ಭಸ್ಮದ ಗಟ್ಟಿ ೫ | ನಿಂಬೆಹಣ್ಣು ೫ |
| ಶಿವದಾರ ೫ | ಬೆಲ್ಲದಚ್ಚು ೫ |
| ಕೊಬ್ಬರಿಬಟ್ಟಲು ೫ | ಉತ್ತುತ್ತಿ |

ತೈಲಾಭ್ಯಂಜನ–(ಪ್ರತಿಮೆಗಳಿಗೆ) ಶ್ರೀಗಂಧದ ಎಣ್ಣೆ, ಸಂಪಿಗೆ ಎಣ್ಣೆ, ದವನದಎಣ್ಣೆ, ಗುಲಾಬಿ ಎಣ್ಣೆ, ಮಲ್ಲಗೆ ಎಣ್ಣೆ ಇತ್ಯಾದಿ. ದೊನ್ನೆ ೧ಕಟ್ಟು ದರ್ಭೆರಜ್ಜು ೨೫ ಮೊಳ ಅಥವಾ ಮಂಟಪದ ಸುತ್ತ ಬರುವಷ್ಟು ಉದ್ದ.

ಬಾಗಿನ—೫ ಅಥವಾ ೩ ಜೊತೆ ಹೊಸ ಮರಗಳು, ಧಾನ್ಯಗಳು, ಬಳೆ ಬಿಚ್ಚೋಲೆ ಇತ್ಯಾದಿ.

ಹಸು-ಕರು—(ದೃಷ್ಟಿ)

ನಿಲುವು ಕನ್ನಡಿ—(ದೃಷ್ಟಿ) ಬೂದಕುಂಬಳ ೨, ದೇವತಾ ವಸ್ತ್ರಾಭರಣಗಳು, ದಶದಾನಗಳು–ವಿಶೇಷ ದಾನಗಳು (ವೀ. ಪೂ, ರ. ಪು. ೧೪೬)

ಮಾಹೇಶ್ವರ ದಂಪತಿಪೂಜೆ—ಪಂಚೆ-ಶಲ್ಯ, ಸೀರೆ-ಕಣ ಇತ್ಯಾದಿ.

ಆಚಾರ್ಯಪೂಜೆ—(ಉಡುಗೊರೆ, ಅಂಗುಲೀಯಕ)

ಋತ್ವಿಕ್‌ಸನ್ಮಾನ—( ,, ) ಇತ್ಯಾದಿ.

## ಅಷ್ಟಬಂಧಕ್ಕೆ ಬೇಕಾಗುವ ಪದಾರ್ಥಗಳು

೧. ಕುರಂಗದಕಲ್ಲು ೨ ಸೇರು (೫೭೦ ಗ್ರಾಂ)

೨. ಸೂಜುಕಲ್ಲು ,, ,,

೩. ಗುಗ್ಗಳ ,, ,, (ಮೈಸಾಕ್ಷಿ)

೪. ಚದರಸರಾಳು ಐದು ಸೇರು (ಕರೀರಾಳು) ೧೪೦೦ ಗ್ರಾಂ.

೫. ಕಾವಿಕಲ್ಲು ೧೫೦ ಗ್ರಾಂ

೬. ಹಸಿ ಅರಗು ೧ ಸೇರು ೨೮೦ ಗ್ರಾಂ

೭. ರಸ ೧೦ ಗ್ರಾಂ ೮. ಮೇಣ ೪೦೦ ಗ್ರಾಂ

೯. ಚಂದ್ರ ೨೮೦ ಗ್ರಾಂ. (ಇದು ವಿಗ್ರಹಗಳನ್ನು ಪೀಠದಲ್ಲಿ ಬಂಧಿಸಿದ ತರುವಾಯ ಮೇಲೆ ಲೇಪಿಸಲಿಕ್ಕಾಗಿ.)

## ಅಷ್ಟಬಂಧವನ್ನು ಸಿದ್ಧಪಡಿಸುವ ಕ್ರಮ

ಮೇಲೆ ಹೇಳಿದ ಪದಾರ್ಥಗಳನ್ನು ಕುಟ್ಟಿ ಹಿಟ್ಟಿನ ವಂದಲಿಯಲ್ಲಿ ಶೋಧಿಸಿ ಇಟ್ಟುಕೊಳ್ಳಬೇಕು.

ಒಲೆಯ ಮೇಲೆ ಬಾಣಲೆಯನ್ನು ಇಟ್ಟು ಮಂದಾಗ್ನಿಪುಟ ಮಾಡಬೇಕು. ಮೊದಲು ಜೇನುಮೇಣ ಚೂರುಮಾಡಿ ಹಾಕಬೇಕು. ಅದು ಕರಗಿದ ಮೇಲೆ ಚದರಸರಾಳುಪುಡಿಗೆ ಸ್ವಲ್ಪ ಒಳ್ಳೆಣ್ಣೆ ಹಾಕಿ ಉದುರು ಉದುರಾಗಿ ನೆನೆಸಿ ಹಾಕಬೇಕು. ಅದು ಕರಗಿದುದನ್ನು ನೋಡಿ ಅರಗಿನಪುಡಿ ಹಾಕಬೇಕು. ತರುವಾಯ ಮೈಸಾಕ್ಷಿ ಗುಗ್ಗಳ ಪುಡಿ ಹಾಕಬೇಕು. ಎಲ್ಲವೂ ಕರಗುತ್ತಿರಲು ಕುರಂಗದ ಕಲ್ಲುಪುಡಿ, ಸೂಚಿಗಲ್ಲುಪುಡಿ, ಕಾವಿಕಲ್ಲು ರಸಗಳನ್ನು ಹಾಕಿ ಚೆನ್ನಾಗಿ ತಿರುವುತ್ತಿರಬೇಕು. ಪದಾರ್ಥಗಳನ್ನು ಹಾಕುವಾಗ ಉಂಡೆ ಕಟ್ಟದ ಹಾಗೆ ತಿರುಗಿಸುತ್ತಿರಬೇಕು. ಕಾಯ್ದು ಏಕರಸವಾಗಿ ಸೌಟನಲ್ಲಿ ಎತ್ತಿದರೆ ನೂಲಿನ ಹಾಗೆ ಧಾರೆ ಬರಬೇಕು. ನೀರಿನಲ್ಲಿ ಹಾಕಿದರೆ ಗಟ್ಟಿಯಾಗಿ ಮುರಿಯುವಂತಾಗುವುದೇ ಹದ. ಆಗ ಬಂಡೆಯಮೇಲೆ ನೀರು ಹಾಕಿ ಅದನ್ನು ಬಿಡುತ್ತಾ ಚಕ್ಕೆಮಾಡಿ ಇಟ್ಟುಕೊಳ್ಳಬೇಕು. ಬೇಕಾದಾಗ ಕಾಯಿಸಿ ವಿಗ್ರಹ ಪೀಠಗಳಿಗೆ ಹಾಕಬೇಕು.

ವಿ. ಸೂ:—ಈ ಕ್ರಮವು ಅನುಭವದಲ್ಲಿದೆ. ಇಷ್ಟರಿಂದ ಸುಮಾರು ೧೦ ವಿಗ್ರಹಗಳನ್ನು ಸ್ಥಾಪಿಸಬಹುದು.

ವಿ. ಸೂ :—ತ್ರಿಶೂಲ (ಅಸ್ತ್ರರಾಜ) ಭೇರಿ, (ಚಿತ್ರ. ೪) ಅಷ್ಟಮಂಗಳ, ದಶಾಯುಧ (ಚಿತ್ರ ೬೭) ರಾಜೋಪಚಾರ ಸಾಮಗ್ರಿ.

**ಪೂಜಾಸಾಧನ**—ಗಂಟೆ, ಜಾಗಟೆ, ಪಂಚಪಾತ್ರೆ, ಉದ್ಧರಣೆ, ದೀಪಾರ್ತಿ ಮುಂತಾದವುಗಳು (ಶಿವಾಲಯಕ್ಕಾಗಿ)

ದೇವೀಪ್ರತಿಷ್ಠೆ (ಪು. ೧೬೪) ಯಿಂದ ಬಿಲ್ವಪ್ರತಿಷ್ಠಾ (೧೯೨) ವರೆಗೆ ಮೇಲೆ ಕಾಣಿಸಿರುವ ಪ್ರತಿಷ್ಠಾ ಪಟ್ಟಿಯಲ್ಲಿ ಆವಶ್ಯಕವಾದವುಗಳನ್ನು ಸಂಗ್ರಹಿಸ ಬೇಕು.

## ನಾಗಪ್ರತಿಷ್ಠೆ

**ಕಾರ್ಯಗಳು**–ಪುಣ್ಯಾಹ, ನಾಂದಿ, ಅಂಕುರಾರ್ಪಣ, ಋತ್ವಿಗ್ವರಣ, ರಕ್ಷಾಬಂಧನ, ವಿಗ್ರಹ ಸಂಸ್ಕಾರಗಳು; ಮಂಟಪ, ಕಲಶಸ್ಥಾಪನ, ಇತ್ಯಾದಿ. [.ಪ್ರ ಪ. ನೋ.]

**ಕಲಶಗಳು**—[ಪ್ರ. ಪ. ನೋ.] ಬಿಂದಿಗೆ ೧, ತಂಬಿಗೆ ೨, ಲೋಟ ೧೦ ದಿಗೀಶ ೮, ಪಂಚಕಲಶ ೫, ಒಟ್ಟು ೨೬ ಕಲಶಗಳು. (ಕಲಶಸಂಖ್ಯೆಗೆ ಅನು ಗುಣವಾಗಿ) ಫಲ, ಪುಷ್ಪ, ವಸ್ತ್ರಾದಿಗಳು. ಯಾಮಪೂಜೆಗೆ ವಿಶೇಷನೈವೇದ್ಯ (ಅಪೂಪ, ಸಜ್ಜಿಗೆ ಕಡಬು, ಕ್ಷೀರ)

**ಪ್ರಧಾನಾಹುತಿ**—ಮುತ್ತುಗ, ಅಮೃತಬಳ್ಳಿ, ಲಾಜ, ಅಪೂಪ, ಚರು, ಆಚಾರ್ಯಪೂಜಾ—ಇತ್ಯಾದಿ. (ಪ್ರ. ಪ. ನೋ.)

## ತಟಾಕಪ್ರತಿಷ್ಠೆ

**ಕಾರ್ಯಗಳು**–ಪುಣ್ಯಾಹ, ನಾಂದಿ, ಅಂಕುರಾರ್ಪಣ, ಋತ್ವಿಗ್ವರಣ, ನವಗ್ರಹ, ಮೃತ್ಯುಂಜಯ.

**ಕಲಶಸ್ಥಾಪನ**—[ಪ್ರ. ಪ. ನೋ.] ಬಿಂದಿಗೆ ೧, ತಂಬಿಗೆ ೧, ಲೋಟ ಗಳು ೧೦ ಒಟ್ಟು ೧೨ ಕಲಶಗಳು.

ಪ್ರಧಾನ-ನವಗ್ರಹ-ಮೃತ್ಯುಂಜಯ ಪ್ರತಿಮೆಗಳು. ಧಾನ್ಯ, ವಸ್ತ್ರ, ವಗೈರೆ [ಪ್ರ. ಪ. ನೋ.] ಸ್ತಂಭ, (ಶಂಕು)

ಹೋಮ-ಪ್ರಧಾನಾಹುತಿ-ಸಮಿತ್ತು-ಚರು-ಭತ್ತ, ಬಲಿಹರಣ, ಸ್ರುವ

ರ್ಣದ ಕೂರ್ಮ, ಮಕರ,ಮತ್ಸ್ಯಾದಿಗಳು ಕರ್ತ್ರಭಿಷೇಕ-ಆಚಾರ್ಯಾದಿಪೂಜಾ. ಇದರಂತೆ ಕೂಪ, ವನಪ್ರತಿಷ್ಠಾ ಮೊದಲಾದವುಗಳು.

### ೨. ಮಹೋತ್ಸವಪ್ರಕರಣ

ಪ್ರತಿಷ್ಠಾ ಪಟ್ಟಿಯಲ್ಲಿರುವ ವಿಗ್ರಹ ಸಂಸ್ಕಾರಗಳು, ಅಷ್ಟಬಂಧ, ಪೀಠ ಸಂಸ್ಕಾರ ಮತ್ತು ದೃಷ್ಟಿಶಾಂತಿ ಮುಂತಾದವುಗಳನ್ನು ಬಿಟ್ಟು ಉಳಿದ ಸಾಮಗ್ರಿಪಟ್ಟಿಯನ್ನು ಸೂಕ್ತ ಕಂಡಂತೆ ಸಿದ್ಧಪಡಿಸಬೇಕು.

**ಶಿವಯೋಗಿ-ಶಿವಾಚಾರ್ಯ ಮಹೋತ್ಸವ**ಗಳಿಗೆ ಗಿರಿಜಾವಿವಾಹೋಪ ಯುಕ್ತ ಸಾಮಗ್ರಿ ವಗೈರೆ ಬಿಟ್ಟು ಉಳಿದವುಗಳನ್ನು ಪರಿಶೀಲಿಸಿ ಬರೆಯಬೇಕು.

### ೩. ಶಾಂತಿಪ್ರಕರಣ

### ವಿನಾಯಕಶಾಂತಿ

**ಕಾರ್ಯಗಳು**—ಪುಣ್ಯಾಹ, ನಾಂದಿ, ಋತ್ವಿಗ್ವರಣ, ನವಗ್ರಹ-ಮೃತ್ಯುಂಜಯ. ಕುಂಭಗಳು ೪, ಅಂಬಿಕಾ-ವಿನಾಯಕ ಪ್ರತಿಮೆಗಳು ೨, ಲೋಟಗಳು ೧೦ ಒಟ್ಟು ೧೬ ಕಲಶಗಳು. ಹೋಮ, ಕರ್ತ್ರಭಿಷೇಕ-ಆಚಾರ್ಯ ಪೂಜಾ-ಆಶೀರ್ವಚನ.

**ಗೋಮುಖಪ್ರಸವ**—ಪುಣ್ಯಾಹ, ನಾಂದಿ, ಋತ್ವಿಗ್ವರಣ, ನವಗ್ರಹ ಹೊಸ ಮೊರ-ಕೆಂಪುವಸ್ತ್ರ, ವಿಷ್ಣು-ವರುಣ ಕುಂಭಗಳು, ಹೋಮ, ಆಚಾರ್ಯ ಪೂಜಾ, ಆಶೀರ್ವಚನ.

**ಸರ್ಪಗಂಡಶಾಂತಿ**—ಪುಣ್ಯಾಹ, ನಾಂದಿ, ಋತ್ವಿಗ್ವರಣ, ನವಗ್ರಹ, ವರುಣಕುಂಭ. ಕಂಚಿನ ಬಟ್ಟಲಿನಲ್ಲಿ ಫಲಪುಷ್ಪ ಪಾಯಸ ಇತ್ಯಾದಿ. ಗಂಡಕ್ಕೆ ವೃಷಭ, ನಕ್ಷತ್ರಕ್ಕೆ-ಧೇನು, ಲಗ್ನಕ್ಕೆ-ಕಾಂಚನಾದಿ ದಾನಗಳು.

**ನಕ್ಷತ್ರಶಾಂತಿಗಳು**— ಗೋಮುಖಪ್ರಸವ ಶಾಂತಿಪೂರ್ವಕವಾಗಿ—ಪುಣ್ಯಾಹ, ನಾಂದಿ, ಋತ್ವಿಗ್ವರಣ, ದಿಗೀಶಕಲಶಗಳು ೮, ಕುಂಭ ೪, ಶತಛಿದ್ರಘಟ೧, ಒಟ್ಟು ೧೩ ಕಲಶಗಳು. ಹೋಮ-ಪಲಾಶ-ಸಮಿತ್ತು, ಆಜ್ಯ, ಚರು, ತಿಲ, ಅಭಿಷೇಕ-ಆಶೀರ್ವಚನ.

**ಅರ್ಕವಿವಾಹ**—ಪುಣ್ಯಾಹ, ನಾಂದಿ, ಋತ್ವಿಗ್ವರಣ, ರಕ್ಷಾಬಂಧನ, ಮಧುಪರ್ಕ, ಕುಂಭಚತುಷ್ಟಯ ಪೂಜಾ ಇತ್ಯಾದಿ.

## ಉಗ್ರರಥ ಶಾಂತಿ [ಕಲಶ ನಿರ್ಣಯ]

| | ೧ನೇ ವರ್ಗ | ೨ನೇ ವರ್ಗ | ೩ನೇ ವರ್ಗ |
|---|---|---|---|
| ಪುಣ್ಯಾಹ | ೨ | ೨ | ೨ |
| ಪ್ರಧಾನ | ೩ | ೩ | ೩ |
| ಚಿರಂಜೀವಿ | ೭ | ೭ | ೭ |
| ವರ್ಷ | ೬೦ | ೬೦ | ೬ |
| ಅಯನ | ೨ | ೨ | ೧ |
| ಋತು | ೬ | ೬ | ೩ |
| ಮಾಸ | ೧೨ | ೬ | ೩ |
| ಪಕ್ಷ | ೨ | ೨ | ೧ |
| ತಿಥಿ | ೧೬ | ೧೬ | ೧ |
| ವಾರ | ೭ | ೭ | ೧ |
| ನಕ್ಷತ್ರ | ೨೭ | ೧ | ೧ |
| ವಸು | ೮ | ೧ | ೧ |
| ರುದ್ರ | ೧೧ | ೧ | ೧ |
| ಆದಿತ್ಯ | ೧೨ | ೧ | ೧ |
| ದಿಗೀಶ | ೮ | ೮ | ೧ |
| ಪಂಚಬ್ರಹ್ಮ | ೫ | ೫ | ೫ |
| ಯೋಗ | ೨೭ | ೧ | ೧ |
| ಕರಣ | ೧೧ | ೧ | ೧ |
| ರಾಶಿಪುರುಷ | ೭ | ೧ | ೧ |
| ರಾಶಿ | ೧೨ | ೧೨ | ೧ |
| ದುರ್ಗಾ | ೯ | ೧ | ೧ |
| ಮಾರುತ | ೭ | ೧ | ೧ |
| ಶತಛಿದ್ರಘಟ | ೧ | ೧ | ೧ |
| | ೨೬೨ | ೧೪೬ | ೪೫ |

## ಉಗ್ರರಥಶಾಂತಿ

ಪೂಜಾಸಾಮಗ್ರಿ [ಪ್ರ. ಪ. ನೋ.]

### ಪಾತ್ರೆಗಳು

ಬಿಂದಿಗೆ ೧
ತಂಬಿಗೆಗಳು ೮
ತಟ್ಟೆಗಳು ೨
ಕಲಶಗಳಿಗೆ ಲೋಟ ಅಥವಾ ಮಣ್ಣಿನ ಕುಡಿಕೆಗಳು
(ಆಯಾ ವರ್ಗದ ಕಲಶ ಸಂಖ್ಯಾನು ಗುಣವಾಗಿ)
ಚರುಪಾತ್ರೆ ೧
ಶತಛಿದ್ರಘಟ ೧
ಚಮಚ ೨

### ವಸ್ತ್ರಾಭರಣಗಳು

ರೇಷ್ಮೆಮುಗುಟ ೧
ಕಣಗಳು ೨
ವಸ್ತ್ರಗಳು ಅಥವಾ ೬ ಗಜ ಮಲ್ಲು (ಆಯಾವರ್ಗದ ಕಲಶ ಸಂಖ್ಯಾ ಗುಣವಾಗಿ)
ಪಂಚೆ ಜೊತೆ ೨
ಸೀರೆ-ಕಣ, ಸುತ್ತು, ಮಿಂಚು, ಕಡಗ, ಮಾಂಗಲ್ಯ (ಲಕ್ಷ್ಮೀ ಕಲಶಕ್ಕೆ)
ಬಾಗಿನ [ಪ್ರ. ಪ. ನೋ.]

ಋತ್ವಿಜರಿಗೆ ಮಡಿಗಳು [ಪ್ರ. ಪ. ನೋ.]

ಸಮಿತ್ತುಗಳು [ಪ್ರ. ಪ. ನೋ.]
ಹೋಮಾಜ್ಯ ,,
ನವಗ್ರಹ-ಮೃತ್ಯುಂಜಯ ಪ್ರತಿಮೆಗಳು, ಧಾನ್ಯ, ಹೋಮದ್ರವ್ಯ ವಗೈರೆ [ಪ್ರ. ಪ. ನೋ.]
ಪಂಚಾಮೃತ-ಅಭಿಷೇಕ ತೀರ್ಥಗಳು (ಪುಣ್ಯ ನದಿಗಳಿಂದ)
ಪಂಚಮೃತ್ತಿಕೆ, ಪಂಚಪಲ್ಲವ [ಪ್ರ. ಪ. ನೋ.]
ಪಂಚಕಲಶ ಪರಡಿಗಳಿಗೆ [ಪ್ರ. ಪ. ನೋ.]
ಅಕ್ಕಿ ,,
ಧಾನ್ಯ [ಪ್ರ. ಪ. ನೋ.]
ತೆಂಗಿನಕಾಯಿ ,,
ಬಾಳೆಹಣ್ಣು ,,
ಖರ್ಜೂರ (ಆಯಾ ವರ್ಗ ಕಲಶ ಸಂಖ್ಯಾನುಗುಣವಾಗಿ)
ಆಜ್ಯ-ಕಂಚಿನ ತಟ್ಟೆ (ದಾನಕ್ಕೆ)
ದಶದಾನಗಳು [ವೀ.ಪೂ.ಪ್ರ.ರ.]
ವಿಶೇಷ ದಾನಗಳು ,,
ಮಾಹೇಶ್ವರಪೂಜೆ [ಪ್ರ.ಪ.ನೋ.]
ಆಚಾರ್ಯಪೂಜೆ ,,
ಋತ್ವಿಕ್ ಸನ್ಮಾನ ,,

## ಅನಾವೃಷ್ಟಿ ಶಾಂತಿ

ಸೂರ್ಯ, ಪರ್ಜನ್ಯ, ಬೃಹಸ್ಪತಿ, ನವಗ್ರಹ, ದಿಗೀಶ, ಋತ್ವಿಗ್ವರಣ, ಮೃತ್ಯುಂಜಯಾದಿ ಕಲಶಗಳು.

**ಶಿವಾಲಯೋ ಕುಂಭಾಭಿಷೇಕ**—ಪುಣ್ಯಾಹ, ನಾಂದಿ,

ಕುಂಭಗಳು ೧೧, ೧೦೧, ಅಥವಾ ೧೦೦೦೧ ವರುಣಾದಿ ಕಲಶಗಳು.

**ಪರ್ಜನ್ಯಜಪ**—ವರುಣಕಲಶ, ವರುಣಜಪ, ಹೋಮಾದಿಗಳು.

**ಗ್ರಾಮಶಾಂತಿ**—೧೧ ಕುಂಭಗಳು, ವಾಸ್ತು (ಪ್ರಧಾನ) ಪ್ರತಿಮೆ, ಮೃತ್ಯುಂಜಯ, ನವಗ್ರಹಹೋಮ.

## ೪. ಧರ್ಮಾಧಿಕಾರಪ್ರಕರಣ

ಷಟ್ಕಲಶಗಳು, ಹೋಮ, ಅಭಿಷೇಕ ಸಾಮಗ್ರಿ, ಪಂಚಮುದ್ರೆಗಳು, ಪಟ್ಟಬಂಧನ, ದಂಡ-ಕಮಂಡಲು ಇತ್ಯಾದಿ.

## ೫. ಉಪಾಸನಾಪ್ರಕರಣ

ಪೂಜಾಸಾಮಗ್ರಿ ಇತ್ಯಾದಿ.



# ಶುದ್ಧಾಶುದ್ಧ

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| ೧ | ೧೧ | ಸುಮುಹೂರ್ತಮಸ್ತು | ಮುಹೂರ್ತೋಽಸ್ತು |
| ೩ | ೧ | ಅನುಗೃಹ್ಣಾಮಃ | ಅನುಗೃಹ್ಣೀಮಃ |
| ೩ | ೪ | ಸಾಕ್ವಾತ | ಸಾಕ್ಷತ |
| ೩ | ೧೩ | ಮಾಾಗನ್ಮ | ಮಾಗನ್ಮ |
| ೪ | ೮ | ತಿಷ್ಮನ್ನಿ | ತಿಷ್ಮನಿ |
| ೪ | ೯ | ತ್ವಾಪ್ರಾಪನ್ನ | ತ್ವಾಪ್ರಾಪನ್ನ |
| ೪ | ೧೧ | ಶೀರಯಾನ್ | ಶೀರಯನ್ |
| ೫ | ೪ | ಣಾತ್ಚ | ಣಾಶ್ಚ |
| ೫ | ೭ | ಶ್ಚಪರೇ | ಶ್ಚಾಪರೇ |
| ೬ | ೧೫ | ಉಧ್ರಿಯ | ಉದ್ಧ್ರಿಯ |
| ೬ | ೧೭ | ಸ್ಮಾನ್ಮ್ಯೋ | ಸ್ಮಾನ್ಮ್ಯೋ |
| ೭ | ೨ | ಜತ್ತೈಶ್ಚಿ | ಜತ್ತೈಶ್ಚಿ |
| ೭ | ೮ | ಶಂಚತು | ಚತು |
| ೭ | ೧೦ | ಕುಂಭಾ್ | ಕುಂಭಾವಿಗ್ರಹಾಂಶ್ಚ |
| ೧೧ | ೧ | ಗುಣ್ಮಾಕ | ಗುಣಾತ್ಮಕ |
| ೧೨ | ೨ | ವರದೊಭವ | ವ್ಯಾಪ್ತೋಭವ। ವರದೋಭವ |
| ೧೩ | ೪ | ಉತ್ತರಃ | ಉತ್ತರತಃ |
| ೧೭ | ೧೧ | ಸಾಧಕೇ | ಸಾಧಿಕೇ |
| ೨೨ | ೩ | ತದ್ಪಟ್ಕೆ | ತದ್ಪಟ್ಕೆ |
| ೩೮ | ೧೩ | ತೋಽಕಾರಃ | ತೋಽಹಂಕಾರಃ |

| | | | |
|---|---|---|---|
| ೪೧ | ೫ | ಯೂಪಸ್ಥಾನಾತ್ಮ | ಯೂಪಸ್ಥಾತ್ಮ |
| ೪೩ | ೧೯ | ತತೋವಹ್ನಿಃ ಹ್ಯೆಂ | ತತೋ ಹ್ಯೆಂ |
| ೪೬ | ೬ | ಕ್ಷಾರಸೂತ್ರ | ರಕ್ಷಾಸೂತ್ರ |
| ೪೭ | ೧೧ | ರಿಕ್ಷೇ | ರಿಕ್ಷೇ |
| ೫೨ | ೧೯ | ಮಾವೋ | ಮಾವೋ॑ |
| ೫೨ | ೨೨ | ಉದ್ಧೃತಾಸಿ | ಉ॒ದ್ಧೃ॑ತಾಸಿ |
| ೬೪ | ೨೦ | ವಾಸ್ತು ಪುರುಷನನ್ನು | ವಾಸ್ತು ಹೋಮಾನಂತರ |
| ೬೪ | ೨೦ | ರಾದಿಗಳಿಂದ ನಿರ್ಮಿಸಿ | ರಾದಿದಂಡಕ್ಕೆ |
| ೬೬ | ೭ | ವಾಸ್ತುಂವ್ರೀಹಿ | ವ್ರೀಹಿತ್ಯಣ್ಯೈಃ |
| ೭೧ | ೧೧ | ಗ್ನಿಶ್ಚ | ಗ್ನಿ॑ಶ್ಚ |
| ೭೧ | ೧೧ | ಧಾ॑ರಯತೇ | ಧಾ॑ರಯತಾಂ |
| ೮೩ | ೨೦ | ವಿಚ್ಛ | ಮಿಚ್ಛ |
| ೯೦ | ೧೦ | ವಶೀ | ಜಹಿ |
| ೯೪ | ೧೪ | ಶ॒ಂಭೋ | ಶ॒ಂಭೂ |
| ೯೪ | ೧೪ | ಷತ್ | ಷಃ |
| ೯೪ | ೧೬ | ಕೇ॑ನ | ತೇ॑ನ |
| ೧೦೫ | ೭ | ಕಸ್ಮಾ᳚ನ್ | ಕಸ್ಮಾ᳚ತ್ |
| ೧೦೬ | ೩ | ಗಾಯತ್ರಾ॑ | ಗಾತ್ರಾ॑ |
| ೧೦೬ | ೩ | ನಿಹಿ॑ತ | ನಿಹ॑ತ |
| ೧೧೧ | ೨ | ಯಚ್ಛಶಿ | ಯಚ್ಛ |
| ೧೧೪ | ೧ | ಪಚ್ಛನ್ | ಗಚ್ಛನ್ |
| ,, | ೧೬ | ಮಿಷ್ಣೋಃ | ವಿಷ್ಣೋಃ |

| | | | |
|---|---|---|---|
| ೧೪೦ | ೭ | ದೀಪ್ತ | ಧೀಷ್ವ |
| ೧೪೧ | ೧೩ | ರ್ಪಿಪ್ರಾಣಾ | ವಿಪ್ರಾಣಾಂ |
| ೧೪೪ | ೧೫ | ಳೋಕ | ಳೋದಕ |
| ೧೭೨ | ೩ | ದ್ಯಾವ್ದ್ಯಾವ | ದ್ವೇದ್ವೇ |
| ೧೭೪ | ೧೯ | ಧ್ವಜಸ್ಯ | ಧ್ವಜಂ |
| ೨೧೧ | ೫ | ಗಳಷ್ಕೈಃ | ಗಳಘೋಷೈಃ |
| ೨೧೫ | ೫ | ಮೃಣಯಾ | ಮೃಣ್ಮಯಾ |
| ೨೩೭ | ೯ | ರಥಸ್ಯ | ರಥಂ |
| ೨೪೦ | ೧೮ | ವಿಸಿಸ್ಮಿತಃ | ವಿಸ್ಮಿತಃ |
| ೨೪೦ | ೨೧ | ಅವತಸ್ಥಿತಂ | ಅವಸ್ಥಿತಂ |
| ೨೫೧ | ೧೭ | ತಂ ಗತ್ವೇನ | ತದಂಗತ್ವೇನ |
| ೨೬೫ | ೨೧ | ಹೇಮಂ | ಹೇಮ |
| ೨೮೮ | ೧ | ನಕ್ಷತ್ರದೇವತೆಗಳನ್ನು ಆಯಾ ನಾಮಮಂತ್ರಗಳಿಂದ ಪೂಜಿಸಬೇಕು. (ಶುದ್ಧ ಪಾಠ) | |
| ೩೦೪ | ೧೩ | ವಾಸ್ತೇ | ವಾಸ್ತೋ |
| ೩೦೯ | ೭ | ಆಪೋ....ಡಾಪೋ | ಆಪೋನ್ನಮಾಪೋಽಮೃತಮಾಪಃ |
| ೩೨೭ | ೧೬ | ನಿವಸ್ವನ್ಯತಮ | ನೀವಸ್ವಮೃತ |
| ೩೩೩ | ೧೩ | ಪ್ರಜಾಃಪ್ರಜಾಃ | ಪ್ರಜಾಃ |
| ,, | ೫ | ವಿತ್ವಾಯ | ವಿಶ್ವಾಯುಃ |
| ,, | ೬ | ಸವಾಯು | ಸರ್ವಾಯು |
| ,, | ೨೦ | ಪಂಚಾಶತಾ | ಪಂಚಾ |
| ೩೩೫ | ೧೪ | ನಾನು | ನಾಮ |
| ೩೩೬ | ೧೮ | ಸ್ವೀಕಾದಿನಾ | ಸ್ವೀಕಾರಾದಿನಾ |
| ೩೫೩ | ೧ | ಅಥೋಪಾಸಃ | ಅಥೋಪಾಸಕಃ |
| ೩೫೭ | ೨೨ | ರಕ್ಷಾರ್ಥಮೇಚ | ರಕ್ಷಾರ್ಥಮೇವಚ |
| ೪೬೨ | ೯ | ವಶ್ತ್ರಾ | ವಸ್ತ್ರಾ |

# ವಿದ್ವಾಂಸರ ಅಭಿಪ್ರಾಯಗಳು

ಶ್ರೀ ಬಿ. ಡಿ. ಜತ್ತಿ ಅವರು ರಾಜನಿವಾಸ್, ಪಾಂಡುಚೆರಿ
ಲೆ|| ಗೌವರ್ನರ್ ೨೨–೧೧–೧೯೬೮

"ಸಕಲ ಜೀವಾವಳಿಗೆ ಲೇಸನೇ ಬಯಸುವರು ಕೂಡಲ ಸಂಗನ ಶರಣರು" ಎಂಬ ಶರಣವಾಣಿಗೆ "ವೀರಶೈವಾಗಮ ಪ್ರಯೋಗರತ್ನವು" ಸಾಕ್ಷಿ.

ಇಷ್ಟಲಿಂಗಧಾರಣದ ಮೂಲಕ ಆತ್ಮೋದ್ಧಾರದ ಗುರಿ ಇಟ್ಟುಕೊಂಡಿರುವ ವೀರಶೈವವು ಜನಸಾಮಾನ್ಯವನ್ನು ಉದ್ಧರಿಸುವುದಕ್ಕಾಗಿ ಸ್ಥಾವರ ದೇವತೋಪಾಸನಾದಿಗಳನ್ನು ಆಗಮೋಕ್ತವಾಗಿ ನೆರವೇರಿಸುತ್ತದೆ. ಇದು ಸತ್ಯಶುದ್ಧ ಕಾಯಕ. ಹಿಮವತ್ಕೇದಾರ, ಶ್ರೀಶೈಲ, ಮುಡುಕುತೊರೆ ಮುಂತಾದ ಕ್ಷೇತ್ರಗಳಲ್ಲಿ ಸ್ಥಾವರ ಲಿಂಗಾರಾಧನೆಯೂ ಮಹದೇಶ್ವರಬೆಟ್ಟ, ಎಡೆಯೂರು, ಸಿದ್ಧಗಂಗಾ, ಕಲಬುರ್ಗಿ, ಮುಂತಾದ ಕ್ಷೇತ್ರಗಳಲ್ಲಿ ಶಿವಾಚಾರ್ಯರ ಹಾಗೂ ಶಿವಯೋಗಿಗಳ ಪ್ರತೀಕಾರಾಧನೆಯೂ ವೀರಶೈವಾಗಮ ಸಂಪ್ರದಾಯದಂತೆ ಆರ್ಷಿಯಿಂದ ನಡೆದುಬರುತ್ತಿರುವುದು ಸರ್ವಶ್ರುತ.

ಪ್ರಕೃತ ಮೈಸೂರಿನ ಶ್ರೀಮನ್ಮಹಾರಾಜ ಸಂಸ್ಕೃತ ಕಾಲೇಜಿನಲ್ಲಿ 'ವೀರಶೈವಾಗಮ' ಮತ್ತು 'ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತ' ವಿಭಾಗಗಳಲ್ಲಿ ಪ್ರಾಧ್ಯಾಪಕರಾಗಿ ವೈದಿಕ ಮತ್ತು ಆಗಮಿಕ ಕ್ರಿಯಾಪರಿಣತರಾಗಿರುವ ಆಸ್ಥಾನವಿದ್ವಾನ್ ವೇ|| ಎಂ. ಜಿ. ನಂಜುಂಡಾರಾಧ್ಯರು ವೀರಶೈವಾಗಮ ಸಂಪ್ರದಾಯದಂತೆ ದೇವತಾಪ್ರತಿಷ್ಠೆ ಮತ್ತು ಮಹೋತ್ಸವಾದಿಗಳನ್ನು ನೆರವೇರಿಸುವ ಮಹಾ ಗ್ರಂಥವನ್ನು ರಚಿಸಿ ಮಹೋಪಕಾರ ಮಾಡಿದ್ದಾರೆ. ಇವರ ಪ್ರಯತ್ನವನ್ನು ಸರ್ಕಾರವು ಪ್ರೋತ್ಸಾಹಿಸುವುದಲ್ಲದೆ ಸಮಾಜವೂ ಆದನ್ನು ಸಾರ್ಥಕಪಡಿಸಿಕೊಂಡು ಕೃತಾರ್ಥವಾಗಲೆಂದು ಹಾರೈಸುತ್ತೇನೆ.



ಶ್ರೀ ಎಸ್. ಆರ್. ಕಂಠಿ ವಿಧಾನಸೌಧ
ವಿದ್ಯಾ ಸಚಿವರು ೨೭-೫-೧೯೬೮

ವೀರಶೈವರು ಇಷ್ಟಲಿಂಗಪೂಜೆಗೆ ಪ್ರಾಧಾನ್ಯ ಕೊಟ್ಟಿದ್ದರೂ ಅವರು ದೇವಾಲಯಗಳನ್ನು ಅಲ್ಲಗೆಳೆದಿಲ್ಲ. ಕೊಲ್ಲಿಪಾಕಿ, ಕೂಡಲಸಂಗಮ, ಶ್ರೀಶೈಲ ಮುಂತಾದ ಪವಿತ್ರ ಕ್ಷೇತ್ರಗಳಲ್ಲಿ ಇಂದಿಗೂ ವೀರಶೈವಾಗಮ ಸಂಪ್ರದಾಯದಂತೆ ಪೂಜಾವಿಧಾನಗಳು ನಡೆಯುತ್ತಿವೆ. ಇಂಥ ದೇವಾಲಯಗಳಲ್ಲಿ ಸಾರ್ವಜನಿಕರಿಗಾಗಿ ಏರ್ಪಡುವ ದೇವತಾಪ್ರತಿಷ್ಠೆಗಳು, ಉತ್ಸವಗಳು ಶಾಸ್ತ್ರೋಕ್ತವಾಗಿ ನಡೆಯುವ ಸಲುವಾಗಿ ಮೈಸೂರು ಸರ್ಕಾರ ಆಗಮಿಕ ಶಿಕ್ಷಣ ವಿಭಾಗವನ್ನು ತೆರೆದಿದೆ. ವೀರಶೈವಾಗಮ ಶಾಖೆಗೆ ಸಂಬಂಧಿಸಿದ ಯೋಗ್ಯ ಗ್ರಂಥವನ್ನು ಶ್ರೀ ಆರಾಧ್ಯರು ಬರೆದು ಉಪಕಾರಮಾಡಿದ್ದಾರೆ. ಶ್ರೀಯುತರು ಕನ್ನಡ ಸಂಸ್ಕೃತ ಭಾಷಗಳಲ್ಲಿ ಅನೇಕ ಗ್ರಂಥಗಳನ್ನು ಬರೆದಿರುವರಲ್ಲದೆ ವೈದಿಕಾಗಮಿಕ ವಿಭಾಗಗಲ್ಲಿಯೂ ನುರಿತವರಾಗಿದ್ದಾರೆ. ಇಂಥ ಪ್ರಯತ್ನವನ್ನು ಸರ್ವರೂ ಪ್ರೋತ್ಸಾಹಿಸುವುದರ ಮೂಲಕ ನಮ್ಮ ಸಂಸ್ಕೃತಿಯನ್ನು ಸಂರಕ್ಷಿಸಬೇಕು.



ಷ॥ ಬ್ರ॥ ಪಟ್ಟಾಧ್ಯಕ್ಷ ಗಿರಿಯಾಪುರ
ಶ್ರೀ ಶ್ರೀ ಸದಾಶಿವಶಿವಾಚಾರ್ಯಸ್ವಾಮಿಗಳು ೧೨-೪-೧೯೬೭

ವಿದ್ಯಾವಿನಯ ಸಂಪನ್ನರೂ ಆತ್ಮೀಯರೂ ಆದ ಆಸ್ಥಾನ ವಿದ್ವಾನ್ ವೇ॥ ಎಂ. ಜಿ. ನಂಜುಂಡಾರಾಧ್ಯರಿಗೆ ಶುಭಾಶೀರ್ವಾದಗಳು.

ನೀವು ಬಹಳ ವರ್ಷಗಳಿಂದ ಬಹುಮುಖವಾಗಿ ಪರಿಶ್ರಮಿಸಿ ವಿಶ್ವದ ಮಾನವಕೋಟಿಗೆ ಎಲ್ಲ ಬಗೆಯ ಸುಖಶಾಂತಿಸಮೃದ್ಧಿಗಳು ಲಭಿಸಿ ಲೋಕ ಕಲ್ಯಾಣವಾಗಲೆಂಬ ದೃಷ್ಟಿಯಿಂದ ವೇದಾಗಮ ಸಮ್ಮತವಾಗಿ ರಚಿಸಿ ಪ್ರಕಟಿಸಿರುವ 'ವೀರಶೈವಾಗಮ ಪ್ರಯೋಗರತ್ನ' ಎಂಬ ಬೃಹದ್ಗ್ರಂಥವನ್ನು ಪರಿಶೀಲಿಸಲಾಯಿತು. ವಿಚಾರಪರಿಪ್ಲುತವಾದ ಉಪೋದ್ಘಾತದಿಂದ ಅಲಂಕೃತವಾದ

ಈ ಕೃತಿಯು ಶಾಸ್ತ್ರ ಶಿಷ್ಟಾಚಾರ ಮತ್ತು ಅನುಭವ ಸಮ್ಮತವಾಗಿ ರಚಿತವಾಗಿರುವುದಲ್ಲದೆ ಕಾಲಾನುಗುಣವಾದ ಸ್ವಾನುಭವ, ಲೋಕಾನುಭವ, ವೈಜ್ಞಾನಿಕ, ಸೌಜ್ಞಾನಿಕ ಹಾಗೂ ವೈದಿಕ ಪದ್ಧತಿವಿಡಿದು ಸಮರ್ಪಕವಾಗಿದೆ. ಗ್ರಂಥಕ್ಕೆ ಕೊಟ್ಟಿರುವ ಕನ್ನಡ ಟೀಕೆ ಮತ್ತು ವಿವರಣೆಗಳು ವೈದಿಕಾಗಮಿಕರಿಗೆ ಮಾತ್ರವಲ್ಲದೆ ಧರ್ಮಾಭಿಮಾನಿಗಳಿಗೂ ಸಹ ತುಂಬಾ ಉಪಯುಕ್ತವಾಗಿವೆ. ವಿಶಿಷ್ಟ ರೀತಿಯಲ್ಲಿ ರಚಿತವಾಗಿರುವ ಗ್ರಂಥದ ಉಪಯುಕ್ತತೆಯನ್ನು ಸಾರಾಸಾರ ವಿಚಾರಪರ ವಿವೇಕಿಗಳು ಗುರ್ತಿಸಿ ಆದರಿಸಲರ್ಹವಾದ ಸತ್ಸಾಹಿತ್ಯ ಕೃತಿಯಿದು ಎಂಬುದೇ ನಮ್ಮ ನಲ್ವರಕೆ. ನಿಮ್ಮ ಇಂಥ ಪ್ರಯತ್ನಗಳು ಹುಲುಸಾಗಿ ಬೆಳೆದು ಬೆಳಗಲಿ.



**ಶ್ರೀ ಸಿ. ಪ್ರ. ಡಾ|| ಶಿವಕುಮಾರಸ್ವಾಮಿಗಳು**

ಸಿದ್ಧಗಂಗಾ
೨೫–೧೧–೧೯೭೮

ಆಸ್ಥಾನ ವಿದ್ವಾನ್ ವೇ|| ಎಂ. ಜಿ. ನಂಜುಂಡಾರಾಧ್ಯರು ವಿದ್ಯಾಪ್ರೇಮಿಗಳು. ಯಾವುದೇ ವಿಷಯವನ್ನು ಆಳವಾಗಿ ಅಭ್ಯಸಿಸಿ ವಿಮರ್ಶಿಸಿ ಜೀರ್ಣಿಸಿಕೊಳ್ಳುವ ಸ್ವಭಾವವುಳ್ಳವರು. ವೈದಿಕ ವಾಙ್ಮಯದಲ್ಲಿ ಅಪಾರವಾದ ಶ್ರದ್ಧೆ, ಶರಣತತ್ವದಲ್ಲಿಯೂ ಅಷ್ಟೇ ನಿಷ್ಠೆ. ಐತಿಹಾಸಿಕ ವಿಚಾರಗಳ ಸಂಶೋಧನೆಯಲ್ಲಿಯೂ ಇವರಿಗೆ ಅಭಿರುಚಿ. ವೈದಿಕ ಮತ್ತು ಆಗಮಿಕ ಪ್ರಯೋಗಗಳಲ್ಲಿ ಅವರಿಗಿರುವ ಅನುಭವಕ್ಕೆ ' ವೀರಶೈವಾಗಮ ಪ್ರಯೋಗ ರತ್ನ ' ನಿದರ್ಶನ.

ವೀರಶೈವಾಗಮ ಸಂಪ್ರದಾಯಕ್ಕೆ ಅನುಗುಣವಾಗಿ ಪ್ರಯೋಗ ಭಾಗವನ್ನು ಅಳವಡಿಸಿರುವ ಇಂಥ ಗ್ರಂಥದ ಕೊರತೆ ತೀಕ್ಷ್ಣವಾಗಿತ್ತು. ವೀರಶೈವಾಗಮಕ್ಕೆ ಸಂಬಂಧಿಸಿದ ಸಾಹಿತ್ಯ ಹಿಂದಿನಿಂದಲೂ ಬಳಕೆಯಲ್ಲಿದೆ. ಅದು ಹಲವಾರು ತಾಡವಾಲೆ ಪ್ರತಿಗಳಲ್ಲಿ ಭಾಗಶಃ ಲಭ್ಯವಾಗುತ್ತಿತ್ತು. ಮೇಲಾಗಿ ಕೆಲಕೆಲವು ಪುರೋಹಿತರ ಕೈಬರವಣಿಗೆಗಳಿಂದ ಅದು ಕಲುಷಿತವೂ ಆಗಿತ್ತು.

ಶ್ರೀ ನಂಜುಂಡಾರಾಧ್ಯರು ಅದನ್ನೆಲ್ಲ ಕ್ರಮಪಡಿಸಿ ಈ ಕೊರತೆಯನ್ನು ಪರಿಹರಿಸಿದ್ದಾರೆ. ಈ ಗ್ರಂಥಕ್ಕೆ ಬರೆದಿರುವ ವಿಚಾರ ಪರಿಪ್ಲುತವಾದ ಉಪೋದ್ಘಾತದಲ್ಲಿ ಅವರು ಉದಾಹರಿಸಿರುವ ಅನೇಕ ಗ್ರಂಥಾಧಾರಗಳಿಂದ ವೀರಶೈವಾಗಮದ ಪ್ರಾಚೀನತೆ, ವೀರಶೈವ ಶಬ್ದಾರ್ಥ, ಸ್ಥಾವರ ಲಿಂಗಾರ್ಚನೆಯಲ್ಲಿ ವೀರಶೈವಾಗಮಿಕರ ಸ್ಥಾನ ಮುಂತಾದ ವಿಷಯಗಳು ಸ್ಪಷ್ಟವಾಗಿವೆ. ಗ್ರಂಥದ ಕಡೆಯಲ್ಲಿ ಕೊಟ್ಟಿರುವ ಅನುಬಂಧಗಳು, ಮಂಡಲಗಳ ಚಿತ್ರಗಳು ಮುಂತಾದವು ಸರ್ವರಿಗೂ ಗ್ರಾಹ್ಯವೆನಿಸಿವೆ.

ಮೈಸೂರು ಸರ್ಕಾರ ವೀರಶೈವಾಗಮ ತರಗತಿಯನ್ನು ಮೈಸೂರು ಶ್ರೀಮನ್ಮಹಾರಾಜ ಸಂಸ್ಕೃತ ಕಾಲೇಜಿನಲ್ಲಿ ಆರಂಭಿಸಿದ ಸಂದರ್ಭದಲ್ಲಿ ಶ್ರೀಯುತ ಆರಾಧ್ಯರು ಮೊದಲನೆಯ ಪ್ರಾಧ್ಯಾಪಕರಾಗಿ ನೇಮಿತರಾಗಿ ಈ ಉಪಯುಕ್ತ ಗ್ರಂಥವನ್ನು ಆಗಮಶಾಖೆಗೆ ನೀಡಿರುವುದು ಸ್ತುತ್ಯ. ವಿದ್ಯಾರ್ಥಿಗಳು ಮತ್ತು ಸಮಾಜ ಬಂಧುಗಳು ವಿದ್ವಾಂಸರ ಮೆಚ್ಚುಗೆಗೆ ಪಾತ್ರವಾದ ಈ ಗ್ರಂಥದ ಸಂಪೂರ್ಣ ಉಪಯೋಗವನ್ನು ಪಡೆದು ಶ್ರೀ ಆರಾಧ್ಯರ ಶ್ರಮವನ್ನು ಸಾರ್ಥಕಗೊಳಿಸುವರೆಂದೂ ದಯಾಮಯನಾದ ಪರಶಿವನು ಇವರಿಗೆ ಸನ್ಮಂಗಳಗಳನ್ನು ಅನುಗ್ರಹಿಸಿ ಇವರಿಂದ ಇನ್ನೂ ಹೆಚ್ಚಿನ ಸೇವೆ ಸಲ್ಲುವಂತೆ ಕರುಣಿಸಲೆಂದೂ ಹಾರೈಸುತ್ತೇವೆ.



ಆಯುರ್ವೇದಾಚಾರ್ಯ, ವೈದ್ಯ'ಮಾರ್ತಾಂಡ
ಷ|| ಬ್ರ|| ಶ್ರೀ ಆಸ್ಥಾನ ವಿದ್ವಾನ್ ಮುತ್ತಿನಕಂತೆ ಮಠ, ಬೆಂಗಳೂರು
**ಪಂಡಿತ ಶ್ರೀ ಶಿವಕುಮಾರಸ್ವಾಮಿಗಳು** ೧೦–೧೧–೧೯೬೮

ಆಸ್ಥಾನ ವಿದ್ವಾನ್ ಶ್ರೀ ಎಂ. ಜಿ. ನಂಜುಂಡಾರಾಧ್ಯರು ಬರೆದಿರುವ ವೀರಶೈವಾಗಮ ಪ್ರಯೋಗರತ್ನವನ್ನು ಆ ಮೂಲಾಗ್ರವಾಗಿ ಅವಲೋಕಿಸಿರುವೆನು. ಇದರಲ್ಲಿ ಸರ್ವದೇವತಾಪ್ರತಿಷ್ಠಾ ಮುಂತಾದ ಐದು ಪ್ರಕರಣಗಳು ಇದ್ದು ವೀರಶೈವಾಗಮಿಕ ಸಂಪ್ರದಾಯದಂತೆ ನಡೆಸಬೇಕಾದ ಪ್ರಯೋಗ ವಿಧಾನವು ಸಕ್ರಮವಾಗಿ ನಿರೂಪಿಸಲ್ಪಟ್ಟಿದೆ. ಉಪೋದ್ಘಾತದಲ್ಲಿ ಶ್ರೀಯುತ

ಆರಾಧ್ಯರು ಉಲ್ಲೇಖಿಸಿರುವ ವೀರಶೈವರು ಮತ್ತು ಸ್ಥಾವರಲಿಂಗಗಳು ಮುಂತಾದ ವಿಷಯಗಳು ಶಾಸ್ತ್ರೀಯವೂ ಅನುಭವ ಸಿದ್ಧವೂ ಆಗಿರುತ್ತವೆ. ವೀರಶೈವಾಗಮ ತರಗತಿಯ ವಿದ್ಯಾರ್ಥಿಗಳು ಈ ಎಲ್ಲ ಭಾಗಗಳನ್ನು ಸಾಂಗವಾಗಿ ಅಧ್ಯಯನಮಾಡಿ ಗ್ರಂಥಕರ್ತರ ಪರಿಶ್ರಮವನ್ನು ಸಾರ್ಥಕಗೊಳಿಸಬೇಕೆಂದು ಆಶಿಸುತ್ತೇನೆ.



ಕಳಾಪ್ರಪೂರ್ಣ, ಸರ್ವದರ್ಶನ ತೀರ್ಥ ಬಳ್ಳಾರಿ
ಆಸ್ಥಾನ ವಿದ್ವಾನ್ ಶ್ರೀ ವೈ. ನಾಗೇಶಶಾಸ್ತ್ರಿಗಳು ೬-೭-೧೯೬೪

ಆಸ್ಥಾನ ವಿದ್ವಾನ್ ಶ್ರೀ ಎಂ. ಜಿ. ನಂಜುಂಡಾರಾಧ್ಯರು ಮೈಸೂರಿನಲ್ಲಿರುವ ಶ್ರೀಮನ್ಮಹಾರಾಜ ಸಂಸ್ಕೃತ ಕಾಲೇಜಿನಲ್ಲಿ ಶಕ್ತಿವಿಶಿಷ್ಟಾದ್ವೈತ ಪ್ರಾಧ್ಯಾಪಕರಾಗಿದ್ದಾರೆ. ಕುಶಾಗ್ರಮತಿಗಳಾದ ಇವರು ವಿದ್ಯಾರ್ಥಿಗಳಾಗಿದ್ದ ಕಾಲದಿಂದಲೂ ನನಗೆ ಸುಪರಿಚಿತರು. ಇವರ ಬಹುಮುಖವಾದ ಪರಿಶ್ರಮ ಶ್ಲಾಘನೀಯ. ಇವರ ಸಾಹಿತ್ಯಾದಿ ಗ್ರಂಥರಚನೆಯು ವಿದ್ವಜ್ಜನಪ್ರಿಯವಾಗಿರುವುದು. ಸದ್ಯಃ ಇವರು ರಚಿಸಿರುವ "ವೀರಶೈವಾಗಮ ಪ್ರಯೋಗ ರತ್ನ" ಎಂಬ ಉದ್ಗ್ರಂಥವು ಇವರ ಬಹು ವರ್ಷಗಳ ಆಗಮಿಕ ಪರಿಶ್ರಮದ ಫಲವಾಗಿ ಬೆಳಕಿಗೆ ಬಂದಿರುವುದು ಅಭಿನಂದನಾರ್ಹವು.

ಶ್ರೀಯುತರು ಗ್ರಂಥಕ್ಕೆ ಬರೆದಿರುವ ಉಪೋದ್ಘಾತದಲ್ಲಿ ಸ್ಥಾವರ ಲಿಂಗಾರ್ಚನಾದಿ ವಿಷಯಗಳಲ್ಲಿ ಸುದೀರ್ಘವಾಗಿ ವಿಶ್ಲೇಷಿಸಿ ಅನೇಕ ಗ್ರಂಥಪ್ರಮಾಣಗಳಿಂದ ಸಮರ್ಥಿಸಿರುವುದು ಮನನೀಯವಾಗಿದೆ. ಲಿಂಗಾಂಗಸಾಮರಸ್ಯ ಸಾಧಕವಾದ ಅರ್ಚನ-ಅರ್ಪಣ-ಅನುಭವಾತ್ಮಕ ಇಷ್ಟಲಿಂಗೋಪಾಸನ ದೃಷ್ಟಿಯಿಂದ ಇತರ ದೇವತಾರ್ಚನಾದಿಗಳನ್ನು ಮಾಡುವುದು ನಿಷಿದ್ಧವಲ್ಲದೆ ಕಾಯಕದೃಷ್ಟಿಯಿಂದ ವೀರಶೈವರಾದ ಆಗಮಿಕರು ಅವುಗಳನ್ನು ಮಾಡಿಸುವುದು ನಿಷಿದ್ಧವಲ್ಲವೆಂಬ ಅಂಶವನ್ನು ಅವರು ಸ್ಪಷ್ಟಪಡಿಸಿದ್ದಾರೆ. ದೇವತಾ ಪ್ರತಿಷ್ಠಾದಿ ಆಗಮಿಕ ಕಾರ್ಯಗಳಲ್ಲಿ ಅಭಿರುಚಿಯುಳ್ಳವರಿಗೆ ಈ ಉದ್ಗ್ರಂಥವು ಸರ್ವವಿಧದಿಂದಲೂ ಸಹಾಯಕವಾಗಿರುವುದೆಂಬುದು ನಿರ್ವಿವಾದ.

ಜಗದ್ಗುರು ಪಟ್ಟದ ಸುತ್ತೂರು ವೀರಸಿಂಹಾಸನ ಮಠ
**ಶ್ರೀ ಶ್ರೀ ಶಿವರಾತ್ರಿ ರಾಜೇಂದ್ರಮಹಾಸ್ವಾಮಿಗಳು** ೨೭-೧೧-೧೯೭೮

ವೀರಶೈವ ಆಚಾರ್ಯರು ಲಿಂಗೋದ್ಭವರೆನಿಸಿರುವುದಲ್ಲದೆ ವೀರಶೈವ ತತ್ತ್ವಸಾಧಕರೆನಿಸಿ ಸಿದ್ಧಿಯನ್ನು ಪಡೆದ ಬಸವಾದಿ ಶಿವಶರಣರೂ ಸಹ ಸ್ಥಾವರ ಲಿಂಗಗಳ ಅಂಕಿತಗಳನ್ನು ತಮ್ಮ ವಚನಗಳ ಕಡೆಯಲ್ಲಿ ಸೂಚಿಸಿದ್ದಾರೆ. ಮೇಲಾಗಿ "ತೇ ವೀರಶೈವಾ ಲೋಕಾನಾಂ ನಿತ್ಯಂ ಕ್ಷೇಮಾಭಿಲಾಷಿಣಃ" (ಕ್ರಿಯಾಸಾರ ಉ. ೧.೧೫೧) ಎಂಬ ಉಕ್ತಿಯಂತೆ "ಸಕಲ ಜೀವಾವಳಿಗೆ ಲೇಸನೇ ಬಯಸುವ" ವೀರಶೈವನು ತನ್ನೊಬ್ಬನ ಶ್ರೇಯಸ್ಸನ್ನು ಗಮನಿಸದೆ ಇಡೀ ಮಾನವ ಲೋಕವನ್ನೇ ಉದ್ಧರಿಸುವ ಸತ್ಯಸಂಕಲ್ಪವುಳ್ಳವನಾದ್ದರಿಂದ ಆತ ಸಾಮಾನ್ಯ ಮಾನವರನ್ನು ಮೇಲೆತ್ತಲು ಶಿವಾಲಯಗಳಲ್ಲಿ ಸತ್ಯಶುದ್ಧ ಕಾಯಕ ಎಂಬ ಉದಾತ್ತ ಭಾವನೆಯಿಂದ ದೇವತಾಪ್ರತಿಷ್ಠಾ, ಮೂರ್ತಿಪೂಜಾದಿಗಳನ್ನು ಲೋಗರಿಗಾಗಿ ನೆರವೇರಿಸುತ್ತಾ ಬಂದಿದ್ದಾನೆ. ಜಗದ್ಗುರು ರೇಣುಕಾಚಾರ್ಯರು ವಿಭೀಷಣನ ಪ್ರಾರ್ಥನೆಯಂತೆ ಮೂರು ಕೋಟಿ ಲಿಂಗಪ್ರತಿಷ್ಠೆ ಮಾಡಿರುವ ಕಥಾನಕ ಇದಕ್ಕೆ ನಿದರ್ಶನ.

ಮೈಸೂರು ಸರಕಾರವು ಹಿಂದಿನಿಂದಲೂ ಶೈವ, ವೈಷ್ಣವ ಮತ್ತು ಪಾಂಚರಾತ್ರ ಸಂಪ್ರದಾಯಗಳ ಪೂಜಾದಿ ಶಿಕ್ಷಣಭಾಗವನ್ನು ಏರ್ಪಡಿಸಿದ್ದು ಈಚೆಗೆ ವೀರಶೈವ ಮತ್ತು ತಂತ್ರಸಾರ ಎಂಬ ಆಗಮ ಶಿಕ್ಷಣ ಶಾಖೆಗಳನ್ನು ಏರ್ಪಡಿಸಿ ಸಮಗ್ರ ಭಾರತಕ್ಕೆ ಮಾದರಿಯಾಗಿದೆ. ಮೈಸೂರು ಸಂಸ್ಥಾನದ ಮುಜರಾಯ್ ವಿಭಾಗದಲ್ಲಿ ರಚಿತವಾಗಿರುವ ಆಗಮವಿದ್ಯಾ ಸಲಹಾ ಸಮಿತಿ ಮತ್ತು ಮೈಸೂರು ಶ್ರೀಮನ್ಮಹಾರಾಜ ಸಂಸ್ಕೃತ ಕಾಲೇಜಿನಲ್ಲಿ ನಡೆಯುವ ಆಗಮಶಿಕ್ಷಣ ಶಾಖೆಗಳು ದೇವಾಲಯಗಳಲ್ಲಿ ಆಗಮೋಕ್ತವಾಗಿ ನಡೆಯಬೇಕಾಗಿರುವ ಕಾರ್ಯಕಲಾಪಗಳನ್ನು ನೆರವೇರಿಸುವ ಅರ್ಚಕರನ್ನು ಹಾಗೂ ಆಗಮಿಕ ಶಿಕ್ಷಣವನ್ನು ರೂಪಿಸುತ್ತವೆ. ಇವುಗಳಲ್ಲಿ ಒಂದಾದ ವೀರಶೈವಾಗಮ ಶಾಖೆಗೆ ಅಗತ್ಯವಾದ ಮುಖ್ಯ ಪಠ್ಯಕ್ರಮಕ್ಕೆ ಸಾಧಕವಾದ "ವೀರಶೈವಾಗಮ ಪ್ರಯೋಗರತ್ನಮ್" ಎಂಬ ಗ್ರಂಥವನ್ನು ಈ ವೀರಶೈವಾಗಮ ಶಾಖೆಯಲ್ಲಿ ಪ್ರಾಧ್ಯಾಪಕರಾಗಿದ್ದ ಆಸ್ಥಾನ ವಿದ್ವಾನ್ ವೇ|| ಎಂ. ಜಿ. ನಂಜುಂಡಾರಾಧ್ಯರು ರಚಿಸಿ ಸಮರ್ಪಿಸಿರುವುದು ಅಭಿನಂದನೀಯ.

## ಶ್ರೀ ಹೆಚ್. ವಿ. ಕೌಜಲಗಿಯವರು

### ಮೈಸೂರು ರಾಜ್ಯದ ಕಂದಾಯ ಮತ್ತು ಮುಜರಾಯಿ ಶಾಖೆಯ ಸಚಿವರು

ಮೈಸೂರು ಸರ್ಕಾರವು ಸಂಸ್ಥಾನದಲ್ಲಿರುವ ಆಯಾ ಸಂಪ್ರದಾಯದ ದೇವಾಲಯಗಳಲ್ಲಿ ಆಗಮೋಕ್ತವಾಗಿ ಪೂಜಾಪುರಸ್ಕಾರಗಳು ಸಾಂಗವಾಗಿ ನಡೆಯಬೇಕೆಂಬ ಸಮುದ್ದೇಶದಿಂದ ಮುಜರಾಯ್ ಶಾಖೆಯ ಆಶ್ರಯದಲ್ಲಿ "ಅಗಮ ವಿದ್ಯಾಸಲಹಾಸಮಿತಿ"ಯನ್ನು ಏರ್ಪಡಿಸಿ ತನ್ಮೂಲಕ ಶೈವ, ವೀರಶೈವ, ವೈಖಾನಸ, ಪಾಂಚರಾತ್ರ ಮತ್ತು ತಂತ್ರಸಾರ ಎಂಬ ಐದು ವಿಭಾಗಗಳನ್ನು ಇದೇ ಶ್ರೀಮನ್ಮಹಾರಾಜ ಸಂಸ್ಕೃತ ಮಹಾ ಪಾಠಶಾಲೆಯಲ್ಲಿ ಸ್ಥಾಪಿಸಿ ಪ್ರೋತ್ಸಾಹಿಸುತ್ತಿದೆ. ಆಗಮ ಅಧ್ಯಯನ ಮಾಡುವ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನಗಳನ್ನೂ ನೀಡುತ್ತಿದೆ.

ಈ ಶಾಖೆಗೆ ಅಗತ್ಯವಾದ ಪಠ್ಯ ಗ್ರಂಥಗಳನ್ನು ತಜ್ಞ ವಿದ್ವಾಂಸರು ಬರೆದು ಪ್ರಕಟಿಸಿದಲ್ಲಿ ಅದಕ್ಕೆ ಸೂಕ್ತ ನೆರವನ್ನು ಸರ್ಕಾರ ನೀಡುತ್ತಲೇ ಇದೆ. ಈ ಸದವಕಾಶವನ್ನು ಕಲ್ಪಿಸಿಕೊಟ್ಟಿರುವ ಶ್ರೀ ನಂಜುಂಡಾರಾಧ್ಯರು ಸರ್ಕಾರದ ಮತ್ತು ಸಮಾಜದ ಕೃತಜ್ಞತೆಗೆ ಪಾತ್ರರೇ ಆಗಿದ್ದಾರೆ.

ಶ್ರೀಯುತ ಆರಾಧ್ಯರು ಭಾರತೀಯ ಸಂಸ್ಕೃತಿಯ ಸಾರ ರೂಪವಾದ "ವೀರಶೈವಾಗಮ ಪ್ರಯೋಗರತ್ನಮ್" ಎಂಬ ಉದ್ಗ್ರಂಥವನ್ನು ಬರೆದು ಆಸ್ತಿಕ ಮಹನೀಯರಿಗೆ ತುಂಬಾ ಉಪಕಾರ ಮಾಡಿದ್ದಾರೆ. ದೇವತಾ ವಿಗ್ರಹಗಳ ಪ್ರತಿಷ್ಠೆ, ಉತ್ಸವ, ಪೂಜೆ ಮತ್ತು ಅದರ ವಿಧಿ ವಿಧಾನಗಳನ್ನು ತಿಳಿಸುವ ಇಂತಹ ಗ್ರಂಥಗಳು ಮಾರಾಟವಾಗುವುದು ಇಂದಿನ ಸ್ಥಿತಿಯಲ್ಲಿ ಕಷ್ಟವಾಗಿದೆ. ಶಾಸ್ತ್ರೀಯವಾದ ಇಂಥ ಗ್ರಂಥಗಳಿಗೆ ಮತ್ತು ಲೇಖಕರಿಗೆ ಸರ್ಕಾರದ ಸಹಾಯ, ಪ್ರೋತ್ಸಾಹಗಳು ಅಗತ್ಯ ಬೇಕಾಗಿವೆ. ಮುಜರಾಯಿ ಶಾಖೆಯೂ ಇತ್ತ ಕಡೆ ಗಮನವಿತ್ತು ಸಾಧ್ಯವಿದ್ದಷ್ಟು ಸಹಾಯ ಮಾಡಲಿದೆ.

———

**ವಿದ್ಯಾವಿಭೂಷಣ ಶ್ರೀ ಓ. ಎನ್. ಲಿಂಗಣ್ಣಯ್ಯ, ಬಿ.ಎ., (ಆನರ್ಸ್)**

ಭಾರತದ ಮತ ಸಂಪ್ರದಾಯಗಳು ವೈದಿಕ, ತಾಂತ್ರಿಕ, ವೈದಿಕ ತಾಂತ್ರಿಕ ಮತ್ತು ತಾಂತ್ರಿಕವೈದಿಕವೆಂದು ನಾಲ್ಕು ವಿಧವಾಗಿವೆ. ಇವುಗಳಲ್ಲಿ ವೀರಶೈವವು "ತಾಂತ್ರಿಕವೈದಿಕ"ವೆನಿಸಿದೆ.

ಶ್ರೀಯುತ ನಂಜುಂಡಾರಾಧ್ಯರು ರಚಿಸಿರುವ "ವೈದಿಕ ವೀರಶೈವಾಗಮ ಪ್ರಯೋಗರತ್ನ"ವು ಈ ದೃಷ್ಟಿಯಿಂದ ವಿಶೇಷ ಮಾನ್ಯತೆಯನ್ನು ಪಡೆದಿದೆ. ಸರ್ಕಾರ ಹಾಗೂ ಸಮಾಜ ಈಕಡೆ ವಿಶೇಷ ಗಮನವನ್ನು ನೀಡುವುದು ಅಗತ್ಯ.

ಶಾಸ್ತ್ರೀಯ ಗ್ರಂಥಗಳಿಗೆ ಜನರ ಪ್ರೋತ್ಸಾಹ ದೊರೆಯದ ಈ ಕಾಲದಲ್ಲಿ ಸರ್ಕಾರದವರು ಎಲ್ಲ ದೇವಸ್ಥಾನಗಳಿಗೆ "ವೀರಶೈವಾಗಮ ಪ್ರಯೋಗರತ್ನಮ್" ಗ್ರಂಥದ ಒಂದು ಸಾವಿರ ಪ್ರತಿಗಳನ್ನಾದರೂ ಕೊಂಡುಕೊಳ್ಳುವುದರ ಮೂಲಕ ಲೇಖಕರಿಗೆ ಸಹಾಯ ಮಾಡುವಂತಾಗಲಿ. ಮತ್ತು ಶ್ರೀ ಆರಾಧ್ಯರ ಇಂತಹ ಅಮೂಲ್ಯ ಕೃತಿಗಳು ಇನ್ನೂ ಹೆಚ್ಚಾಗಿ ಹೊರಬರಲಿ.

---

**ಶ್ರೀ ಕೆ. ಸೀತಾರಾಮ ಸೋಮಯಾಜೀ** ಮೈಸೂರು
**ಶೈವಾಗಮ ಪ್ರಾಧ್ಯಾಪಕಃ** ೩೦-೯-೧೯೭೮

ನೈಕಾಗಮಗ್ರಂಥಾನಾಂ ಪರಿಶೀಲನೇನ ಸಮಾಸಾದಿತಂ ವೈದಗ್ಧ್ಯಂ ಶ್ರೀ ವಿಶೇಷಂ ವೀರಶೈವಾಗಮ ಪ್ರಯೋಗರತ್ನನಾಮ್ನಾ ಗ್ರಂಥೇನ ಪ್ರಕಟ್ಯ ಕಾರ್ಷ್ಣುಃ ಶ್ರೀ ಎಂ. ಜಿ. ನಂಜುಂಡಾರಾಧ್ಯಮಹೋದಯಾಃ

ಸಂಸಾರೇ ಪುರುಷಾಃ ಸಂತಃ ಪುರುಷಾರ್ಥ ಚತುಷ್ಟಯಮ್ ।
ಪ್ರಾಪ್ತುಂ ಕುರ್ಯಾದ್ದೇವತಾನಾಂ ಸಮ್ಯಗಾರಾಧನಂತ್ವಿಹ ॥

ಇತ್ಯುಕ್ತವದ್ವಿಶೇಷತಃ ವೀರಶೈವಾನಾಂ ತತ್ಸಂಪ್ರದಾಯ ಮನುಸೃತ್ಯ ಪುರುಷಾರ್ಥ ಪ್ರಾಪ್ತಿಸಾಧನೀಭೂತಾರಾಧನಾನುಷ್ಠಾನೋಪಯೋಗಿ ಗ್ರಂಥ ಪ್ರಕಟನೇನ ಕೃತಜನೋಪಕೃತೀನಾಂ ಶ್ರೀ ಆರಾಧ್ಯಾನಾಂ ಪ್ರಯತ್ನಃ ಅತೀವಾಭಿನಂದನಾರ್ಹಃ ಇತಿ ಶಮ್.

ಈ ಹೊತ್ತಗೆಯಲ್ಲಿ ಸರ್ವದೇವತಾಪ್ರತಿಷ್ಠೆ, ಮಹೋತ್ಸವ, ಶಾಂತಿ, ಧರ್ಮಾಧಿಕಾರ ಮತ್ತು ಉಪಾಸನ ಎಂಬ ಐದು ಪ್ರಕರಣಗಳಿವೆ.

ಮೊದಲ ಪ್ರಕರಣದಲ್ಲಿ ಜನಸಾಮಾನ್ಯರ, ಭಕ್ತಿಪ್ರಚೋದನೆಗಾಗಿ ಸ್ಥಾಪಿಸುವ ಶಿವಲಿಂಗ, ಪಾರ್ವತಿ, ಗಣಪತಿ, ಸ್ಕಂದ, ವೀರಭದ್ರ, ವೃಷಭ, ಮಾರುತಿ, ವಿಷ್ಣು, ನಾಗ, ಅಶ್ವತ್ಥ, ತುಲಸಿ, ತಟಾಕ, ಕೂಪ, ವನ ಮುಂತಾದ ದೇವತಾ[illegible]ತಿಷ್ಠೆಗಳೂ ;

ಮಹೋತ್ಸವ ಪ್ರಕರಣದಲ್ಲಿ ಗಿ[illegible]ಲ್ಯಾಣ, ರಥೋತ್ಸವ, ದಕ್ಷಯಾಗ, ಶಿವಯೋಗಿ ಮತ್ತು ಶಿವಾಚಾರ್ಯರ ಉತ್ಸವಕ್ರಮಗಳೂ; ನವರಾತ್ರಿ, ಕೃತ್ತಿಕೋತ್ಸವ, ಧನುರ್ಮಾಸ, ಶಿವರಾತ್ರಿಪೂಜಾಕಲ್ಪಗಳೂ ;

ಶಾಂತಿಪ್ರಕರಣದಲ್ಲಿ ಗೃಹಸ್ಥರಿಗೆ ಅವಶ್ಯವೆನಿಸಿರುವ ವಿನಾಯಕ, ಗೋಮುಖಪ್ರಸವ, ನಕ್ಷತ್ರಾದಿ ಶಾಂತಿಗಳೂ; ಉಗ್ರರಥ, ಭೀಮರಥ, ಸಹಸ್ರಚಂದ್ರದರ್ಶನ, ಶತಾಭಿಷೇಚನ, ಪರ್ಜನ್ಯಜಪ, ಕುಂಭಾಭಿಷೇಕ, ಗ್ರಾಮಶಾಂತಿ ಮುಂತಾದಕ್ರಮಗಳೂ ;

ಧರ್ಮಾಧಿಕಾರ ಪ್ರಕರಣದಲ್ಲಿ ವೀರಶೈವ ಸಮಾಜದ ಧರ್ಮಪೀಠಗಳಲ್ಲಿ ಎಸಗುವ ಜಗದ್ಗುರು ಪಟ್ಟಾಭಿಷೇಕ, ನಿರಾಭಾರಿ ಜಂಗಮಾಧಿಕಾರ, ಚರ-ಸ್ಥಿರ ವಿವೇಕ, ಮಹಾಪಾದಪೂಜಾ, ಅನುಗ್ರಹಾದಿ ವಿಧಿಗಳೂ ;

ಉಪಾಸನಾಪ್ರಕರಣದಲ್ಲಿ ದೇವಾಲಯಗಳಲ್ಲಿ ಹಾಗೂ ಗೃಹಸ್ಥರು ಅಂದಂದಿಗೆ ಎಸಗುವ ವಿವಿಧ ದೇವ[illegible]ಜಾದಿ ಕಲ್ಪಗಳೂ ಸಹ ವೈದಿಕಾಗಮ ಕಲ್ಪೋಕ್ತ ಕ್ರಮ[illegible] ನಿರೂಪಿಸಲ್ಪಟ್ಟಿವೆ. ಉಪಯುಕ್ತ ವಿಷಯಗಳ ವಿಸ್ತೃ[illegible] ಮತ್ತು ಅನುಬಂಧದೊಡನೆ ರಚಿತವಾಗಿರುವ ಈ ಮಹಾಗ್ರಂಥವು ಪ್ರತಿಯೊಂದು ಮನೆಯಲ್ಲಿಯೂ ಅವಶ್ಯ ಇರತಕ್ಕುದು.